# ಕೋಳಿ



ಸೂಚನೆ:—ಈ ನಾಟಕ ಪ್ರದರ್ಶನಕ್ಕೆ ಬಣ್ಣಬಣ್ಣದ ಬೆಲೆಯುಳ್ಳ ಉಡಿಗೆತೊಡಿಗೆಗಳೂ ಜಗಜಗಿಸುವ ಫರದೆಯೂ ಅಗತ್ಯವಿಲ್ಲ.

ರಂಗದ ಮುಂಭಾಗದ ಪರದೆಯು ಕೆಂಪು ಬಣ್ಣಕ್ಕಿದ್ದು ಪಕ್ಕಕ್ಕೆ ಸರಿಯುವಂತಿದ್ದರೆ ಮೇಲು.

ರಂಗದ ಹಿಂಭಾಗದಲ್ಲಿ ನೀಲಿಯ ಫರದೆಯೂ ಮಧ್ಯದಲ್ಲಿ ಸುಲಭದಲ್ಲಿ ಜರುಗಿಸಬಹುದಾದ ಬಿಳಿಯ ಬಟ್ಟೆಯ ಫರದೆಯೂ ಇದ್ದರೆ ಒಳ್ಳೆಯದು.

ಆವಶ್ಯಕವಾದ ಮತ್ತೆ ಕೆಲವು ದೃಶ್ಯಗಳನ್ನು ತೆಳುವಾದ ಕಾಷೀಬಣ್ಣದ ಕಾಗದದಲ್ಲಿ ಅಥವ ಬಟ್ಟೆಯಲ್ಲಿ ತಯಾರಿಸಿಕೊಳ್ಳಬಹುದು.

ಒಂದೆರಡು ಕಡೆಗಳಲ್ಲಿ ಬಿಳಿಯ ಫರದೆಯ ಹಿಂದೆ ಕೆಲವು ದೃಶ್ಯಗಳನ್ನು ಏರ್ಪಡಿಸಿ, ರಂಗದ ದೀಪಗಳನ್ನೆಲ್ಲಾ ಆರಿಸಿ ಹಿಂಭಾಗದಲ್ಲಿ ಮಾತ್ರ ಪ್ರಕಾಶವಾದ ದೀಪಗಳನ್ನಿಟ್ಟು ನೆರಳಿನ ಮೂಲಕ ಚಲನವಲನಗಳನ್ನು ತೋರಿಸುವ ದೃಶ್ಯಗಳನ್ನು ತಂದಿದೆ. ವಿದ್ಯುದ್ದೀಪವಿಲ್ಲದ ಕಡೆಯಲ್ಲಿ ಈ ಬಿಳಿಯತೆರೆ ಇಲ್ಲದೆಯೇ ಈ ದೃಶ್ಯವನ್ನು ತೋರಿಸಬಹುದು.

ಈ ನಾಟಕದಲ್ಲಿ ಬರುವ "ಯಂತ್ರಭೂತವು" ಆಚ್ಚಕಪ್ಪು ಬಣ್ಣಕ್ಕಿದ್ದು ದೊಡ್ಡದೊಡ್ಡ ಚಕ್ರಗಳಿಂದಲೂ ವಿಕಾರವೂ ಭಯಂಕರವೂ ಆದ ಮುಂಭಾಗದಿಂದಲೂ ಕೂಡಿ ಹೊಗೆಯುಗುಳುತ್ತ ಘುಗ್‌ಭುಗ್ ಧ್ವನಿಮಾಡುತ್ತಿರಬೇಕು. ಇದನ್ನು ಬಿದಿರು ದಬ್ಬೆಗಳಲ್ಲಿ ಮಾಡಿಸಿ ಕರಿಯ ಬಟ್ಟೆಗಳನ್ನು ಹಾಕಿ ತಯಾರಿಸಬಹುದು.



# ಪಾತ್ರಗಳು.

ದೊಡ್ಡಯ್ಯ.............ಕೋಲಿ.

ಕಾಳಯ್ಯ...............ವೃದ್ಧನಾದ ಕೋಲಿ.

ದೇವಿ..................ಕಾಳಯ್ಯನ ಮಗಳು.

ಕಾರಕ..................ಮುಖ್ಯ ಮೇಸ್ತ್ರಿ.

ದಾಮೋದರ............ಹಣಗಾರ.

ಕುಮಾರ ... ...........ದಾಮೋದರನ ಮಿತ್ರ.

ಪೂರ್ಣಾನಂದ...........ಹರಿದಾಸ.

ಪೋಲೀಸಿನವರು — ಕೋಲಿಕಾರರು — ಕೆಲಸಗಾರರು

ತಿರುಪೆಯವರು ಇಬ್ಬರು ಮಕ್ಕಳು- ಮತ್ತು ಹೆಂಗಸರು

ನಾಟಕದ ಸಾಹಿತ್ಯವನ್ನು ಓದಲು ಅನುಕೂಲಿಸುವ ಭಾಷೆಯಲ್ಲಿ ಬರೆದಿದೆ. ರಂಗದ ಸೂತ್ರಧಾರರಿಗೆ, ವಾಚಕರಿಗೆ ಉಚ್ಚಾರ ಮತ್ತು ಪೋಣಿಕೆಗಳನ್ನು ಪಾತ್ರಗಳ ಯೋಗ್ಯತೆಗೆ ತಕ್ಕಂತೆ ಅರ್ಥವ್ಯತ್ಯಾಸವಾಗದ ರೀತಿಯಲ್ಲಿ ಅಣಿಮಾಡಿಕೊಳ್ಳುವ ಸ್ವಾತಂತ್ರ್ಯವುಂಟು.

# ಕೂಲಿ



## ಅಂಕ ೧. ನೋಟ. ೧.

ಮುಂಜಾನೆಯ ಅರುಣಪ್ರಭೆಯನ್ನು ತೋರಿಸುವಂತೆ ಸಾಮಾನ್ಯವಾದ ಬೆಳಕು ಬರುತ್ತಿರುವುದು. ಇಬ್ಬರು ಯುವತಿಯರು ಕುಳಿತು ಮೆತ್ತಗೆ ರಾಗವಾಗಿ ಹಾಡುಹೇಳುತ್ತ ರಾಗಿ ಬೀಸುತ್ತಿರುವರು. ಕೊಂಚಹೊತ್ತಿನ ಮೇಲೆ ವೃದ್ಧಳೊಬ್ಬಳು ತನ್ನ ಚರಕವನ್ನು ತಂದಿಟ್ಟುಕೊಂಡು ದಾರತೆಗೆಯುವುದಕ್ಕಾರಂಭಿಸುವಳು.

ಬೆಳಕು ಮತ್ತಷ್ಟು ಹೆಚ್ಚುವುದು. ಇಬ್ಬರು ಹುಡುಗರು ಮರದ ಕೊಂಬೆಗಳನ್ನು ಹಿಡಿದುಕೊಂಡು ಹಾಡುತ್ತ ಕುಣಿಯುತ್ತ ಬರುವರು. ಹುಡುಗರು ಕುಣಿಯುತ್ತ ಬಂದಾಗ ರಾಗಿ ಬೀಸುವವರ ಧ್ವನಿಯು ಮೆಲ್ಲಗೆ ಸ್ತಬ್ಧವಾಗುವುದು

ವಿದ್ಯುದ್ದೀಪದ ಸೌಕರ್ಯವಿರುವುದಾದರೆ ಈ ದೃಶ್ಯವನ್ನೆಲ್ಲ ಬಿಳಿಯ ಪರದೆಯ ಹಿಂದೆ ನಟಿಸಬಹುದು. ಈ ಏರ್ಪಾಡಿನಿಂದ ವ್ಯಕ್ತಿಗಳು ಕಾಣದೆ ಅವರ ಚಲನವಲನಗಳು ಮಾತ್ರ ಕಂಡು ಸಂಗೀತವು ಕೇಳಿಬರುವುದು

ರಂಗದ ಮುಂಭಾಗದಲ್ಲಿ ಗಂಡಸರೂ ಹೆಂಗಸರೂ ಕುಕ್ಕೆ, ಮಂಕರಿ, ಗುದ್ದಲಿ ಮುಂತಾದುವನ್ನು ತೆಗೆದುಕೊಂಡು ಯಾವುದನ್ನೂ ಲಕ್ಷಿಸದೇ ಆತುರದಿಂದ ವೇಗವಾಗಿ ನಡೆಯುವರು. ನಾಲ್ಕಾರು ಜನರು ಮುಂದೆ ಹೋದನಂತರ, ಹರಕು ಅಂಗಿಯನ್ನುಟ್ಟು, ಹೆಗಲಮೇಲೆ ಗುದ್ದಲಿಯನ್ನು ಹಾಕಿಕೊಂಡು ಮೆತ್ತಗೆ ಪುಟ್ಟಪ್ಪನೆಂಬ ತರುಣನೊಬ್ಬನು ಪ್ರವೇಶಿಸುವನು. ಇವನ ಮುಖದಲ್ಲಿ ಆಲೋಚನಾತರಂಗಗಳು ಎದ್ದು ಕಾಣುವಂತಿರುವುದು. ಈತನು ರಂಗಕ್ಕೆ ಪ್ರವೇಶಿಸಿದ ಕೊಂಚಹೊತ್ತಿನಲ್ಲಿಯೇ ಆ ನೋಟದಲ್ಲಿಯೂ ಸಂಗೀತದಲ್ಲಿಯೂ ಮಗ್ನನಾಗಿ ಆನಂದಪರವಶನಾಗುವನು. ಬಳಿಕ ಹತ್ತಿರದ ಕಲ್ಲುಬಂಡೆಯಮೇಲೆ ಕುಳಿತು ತನ

ದೂಗುತ್ತ ತಾನೂ ತಾಳ ಹಾಕುತ್ತಿರುವನು. ಮತ್ತೆ ಕೆಲವರು ಆತುರದಿಂದ ಕೆಲಸಕ್ಕೆ ನಡೆಯುವರು. ಕುಳಿತಿದ್ದ ದೊಡ್ಡನು ಯಾರನ್ನೂ ಗಮನಿಸುವುದಿಲ್ಲ. ಕೊಂಚ ಹೊತ್ತಿನಮೇಲೆ ವೃದ್ಧನಾದ ಕಾಳಯ್ಯನೂ ಇವನ ಮಗಳು ದೇವಿಯೂ ಪ್ರವೇಶಿಸುವರು. ದೊಡ್ಡನು ಆಗಲೂ ಮೈಮರೆತು ಕುಳಿತಿರುವನು.

ಕಾಳಯ್ಯ

ದೊಡ್ಡ! ಏನು ಇಷ್ಟೊಂದು ಆನಂದ! ಈ ಆನಂದದಲ್ಲಿ ಕೆಲಸವನ್ನೂ ಮರತೆಯಾ! ಅಲ್ಲಿನೋಡು! ಬಿಸಿಲು ಮರದಮೇಲೇರಿಬಿಟ್ಟಿದೆ.

ದೊಡ್ಡ

ಮಾವ! ಈ ನೋಟ; ಈ ಹಾಡು............ ನನಗೆ ಎಲ್ಲವನ್ನೂ ಮರೆಸಿ ಬಿಟ್ಟಿವೆ.

ನಮ್ಮೂರಿನ ಅಪ್ಪನಕಾಲದ ಆನಂದವನ್ನು ಕಣ್ಣೆದುರಿಗೆ ತಂದು ತೋರುತ್ತಿವೆ.

ದೇವಿ! ನೋಡು ಬೆಳಕು ಹರಿಯುವ ವೇಳೆಗಾಗಲೇ ನಮ್ಮವರು ಎಷ್ಟು ಆನಂದದಿಂದ ಕೆಲಸ ಮಾಡುತ್ತಿರುವರು. ಮಕ್ಕಳ ಕುಣಿತ, ಹೆಂಗಸರ ಹಾಡು, ಇಲ್ಲಿ ನೋಡು ಈ ಆನಂದವನ್ನು.

ದೇವಿಯು ಹಸನ್ಮುಖದಿಂದ ತಲೆತೂಗುವಳು.

ಕಾಳಯ್ಯ

ಈ ಆನಂದದಲ್ಲಿ ಕಾರಕನ ಚಾವಟಿಯೇಟನ್ನು ಮರೆತೆಯಾ? ಹೊತ್ತಾದರೆ ಕೆಲಸದಿಂದೋಡಿಸಿ ಹೊಟ್ಟೆಗಿಲ್ಲದಂತೆ ಮಾಡಿದರೇನು ಮಾಡುವೆ?

ಬಾ! ದೊಡ್ಡಾ ಬಾ! ಹೋಗುವ. ಹೊತ್ತಾಯಿತು!

ದೊಡ್ಡ

ಮಾವ! ನನಗೆ ಇದನ್ನು ನೋಡಿ ನಮ್ಮ ತಾಯಿ ಕೋಳಿಕೂಗುವುದಕ್ಕೆ ಮುಂಚೆ ಹೇಳುತ್ತಿದ್ದ

ಹಾಡು ಕೇಳಿದಂತಾಗುತ್ತಿದೆ. ನಾವು ಚಿಕ್ಕಂದಿನಲ್ಲಿ ಹಳ್ಳಿಯಲ್ಲಿ ಹುಡುಗರೊಡನೆ ಆಡುತ್ತಿದ್ದುದು ನೆನಪಿಗೆ ಬರುತ್ತಿದೆ.

ಆ ಆರಂಭ, ಆ ಹಬ್ಬ, ಆ ಆಟ, ಕಣ್ಣಿಗೆ ಕಟ್ಟಿದಂತಾಗಿ ಮುಂದೆ ಹೋಗಲು ಮನಸ್ಸೇ ಬರುವುದಿಲ್ಲ!

ದೇವಿಯ ಹತ್ತಿರಕ್ಕೆ ಬಂದು

ದೇವೀ! ನೀನೂ ಹೀಗೆ ಆಡಲು ಆಶಿಸುವುದಿಲ್ಲವೇ! ಅಲ್ಲಿ ನೋಡು ಆ ಮಕ್ಕಳು ಎಷ್ಟು ಮುದ್ದಾಗಿ ಕುಣಿಯುತ್ತಿರುವರು.

ದೇವಿ

ಹೌದು ! ಆದರೆ....ನಾವು ಹುಟ್ಟಿದ್ದು ಕೆಲಸಕ್ಕಾಗಿ. ಆಟಪಾಟಗಳು ನಮಗಲ್ಲ!

ಕಾಳಯ್ಯ

ದೊಡ್ಡ! ನಿನಗೆ ಬುದ್ಧಿ ಸರಿಯಾಗಿಲ್ಲ! ನೀನು ಕಷ್ಟಕ್ಕೆ ಸಿಕ್ಕುವುದಲ್ಲದೆ ನಮ್ಮನ್ನೂ ಸಿಕ್ಕಿಸುವೆ!

ನಾವು ನೋಡುತ್ತ ಕೂತುಕೊಂಡರೆ ಹೊಟ್ಟೆಗೇನು ಮಾಡುವುದು ! ಬೆಳಗಿಂದ ಸಾಯಂಕಾಲದವರೆಗೆ ದುಡಿದರೆತಾನೇ ಹೊಟ್ಟೆ ತುಂಬುವುದು.

ದೇವೀ ! ನೀನು ಬಾ ! ನಾವು ಹೋಗೋಣ; ಹೊತ್ತೇರಿ ಹೋಯಿತು.

ಹೊರಡುವನು. ದೇವಿಯೂ ಹಿಂತಿರುಗಿ ನೋಡುತ್ತ ನೋಡುತ್ತ ಹೊರಟುಹೋಗುವಳು. ಕುಣಿಯುವುದು, ನೂಲುವುದು ಬೀಸುವುದು ಕ್ರಮಕ್ರಮವಾಗಿ ಮರೆಯಾಗುತ್ತ ಬರುವುದು, ದೊಡ್ಡನೂ ಕಾಲೆಳೆಯುತ್ತಾ ಹೊರಡುವನು. ಬಲವಾದ ಬಿರುಗಾಳಿಯ ಶಬ್ದವಾಗುವುದು.

### ದೊಡ್ಡ

ಮೇಲೆ ನೋಡುತ್ತ

ಏನಿದು! ಇಷ್ಟುಹೊತ್ತಿನಲ್ಲಿ ಬಿರುಗಾಳಿಯೆದ್ದಿದೆ! ಈ ಧ್ವನಿಯೂ ಭಯಂಕರವಾಗಿದೆ.

ಜಾಗ್ರತೆಯಾಗಿ ನಡೆಯುತ್ತ ಮರೆಯಾಗುವನು. ಪರದೆಯ ಮೇಲೆ ರಕ್ತದಂತೆ ಕೆಂಪುಬಣ್ಣವು ಚಿಮ್ಮುವುದು. ದೀಪಗಳೆಲ್ಲ ಕೊಂಚಹೊತ್ತು ಆರುವುವು. ಭಯಂಕರವಾದ ಯಂತ್ರದ ಘುಗ್‌ಘುಗ್ ಶಬ್ದವು ಕೇಳಿ ಬರುವುದು. ಮಹಾಭೂತದಂತಿರುವ ಯಂತ್ರವು ತನ್ನ ದೊಡ್ಡ ಚಕ್ರಗಳನ್ನು ಜನರ ಮೇಲೆ ಉರುಳಿಸಿ ಕೊಂಡು ಹೋಗಲು ನುಗ್ಗುತ್ತ ಪ್ರವೇಶಿಸುವುದು.

### ಜನರು

ಆ ಹಾ ಹಾ! ಅಯ್ಯೋ! ಅಪ್ಪಾ!

ಅಯ್ಯಯ್ಯೋ! ಅಮ್ಮಾ! ಹಾ!

ಈ ರೀತಿಯಲ್ಲಿ ಜನರು ಚೀರುವರು. ಆ ಯಂತ್ರಕ್ಕೆ ಸಿಕ್ಕಿ ತಪ್ಪಿಸಿಕೊಂಡು ಕೆಲವರು ತಮ್ಮ ಕೈಗಳಿಂದಲೂ, ಕೆಲವರು ಕಾಲುಗಳಿಂದಲೂ ರಕ್ತವನ್ನು ಸುರಿಸುತ್ತ ಓಡುವರು, ಯಂತ್ರವು ನಿಧಾನವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗು ವುದು.

(ತೆರೆ ಬೀಳುವುದು)



# ಅಂಕ ೧ — ನೋಟ ೨

ರಂಗದ ಹಿಂಭಾಗದಲ್ಲಿ ಕಲ್ಲಿನ ಗೋಡೆಯನ್ನು ಕಟ್ಟುತ್ತಿರುವರು. ಕೆಲವರು ಕಷ್ಟದಿಂದ ಕಲ್ಲೆತ್ತಿ ಕೊಡುತ್ತಿರುವರು. ಕೆಲವರು ಗಾರೆ ಕಲ್ಲು ಮುಂತಾದುವನ್ನು ಹೊತ್ತು ನಡೆಯುತ್ತಿರುವರು. ಮುಂಭಾಗದಲ್ಲಿ ದೊಡ್ಡನು ಕಲ್ಲುತುಂಬಿ ಹೊರಿಸುತ್ತಿರುವನು. ಕಾರಕನು ಕೈಯಲ್ಲಿ ಚಾವಟಿಯನ್ನು ಹಿಡಿದುಕೊಂಡು ಕ್ರೌರ್ಯದ ಮೂರ್ತಿಯಂತೆ ಕೂಲಿಯವರನ್ನು ಹೆದರಿಸುತ್ತ ಮೇಲು ವಿಚಾರಣೆ ಮಾಡುವನು.

### ಕಾರಕ

ಬೇಗನೆ ನಡೆಯಿರಿ. ಕೆಲಸವೇನೂ ಆಗಿಲ್ಲ.
ಲೇ! ದೊಡ್ಡ! ಬೇಗಬೇಗನೆ ತುಂಬು.

ಕಟ್ಟಡದಬಳಿ ಕೂಲಿಯೊಬ್ಬನು ಎತ್ತಲಾರದೆ ಕಲ್ಲೆತ್ತಿ ಕೊಡುತ್ತಿರುವನನ್ನು ನೋಡಿ

ಏನು! ಆಟವಾಡುವೆಯಾ!
ಕೆಲಸ ನಿಂತುಹೋಗಿರುವುದು ಕಾಣುವುದಿಲ್ಲವೇ!
ಕೊಡು, ಬೇಗಬೇಗನೆ!

### ಕೂಲಿಕಾರ

ಎತ್ತಿನೋಡಿದರೆ ಗೊತ್ತಾಗುವುದು. ಮಾತಾಡುವುದಕ್ಕೇನು!

### ಕಾರಕ

ಎಷ್ಟೋ ಮಾತು! ಮುಚ್ಚುಬಾಯಿ!
ಇಲ್ಲಿ ನೋಡು!........ .......

ಚಾವಟಿಯನ್ನೆತ್ತುವನು. ಸದ್ದಿಲ್ಲದೆ ಕೆಲಸ ನಡೆಯುವುದು. ಕೋಪದಿಂದ ಕೂಲಿಯು ಕಾರಕನ ಮುಖನೋಡುವನು.

### ೧ನೇ ಹೆಂಗಸು

ದೊಡ್ಡನನ್ನು ಕುರಿತು

ಇಷ್ಟೊಂದು ಯಾಕೆ ತುಂಬುವೇ?

ನಾವೇನು ಮನುಷ್ಯರೋ ! ಮೃಗಗಳೋ ?

೨ನೇ ಹೆಂಗಸು

ಹೊತ್ತುತಿರುಗುತ್ತಾ ಬಂತು. ಬಿಸಲು ಉರಿಯುತ್ತಿದೆ. ಕಾಲು ಸುಡುತ್ತದೆ! ಇನ್ನೆಷ್ಟು ಹೊತ್ತಿಗೆ ಕೆಲಸ ನಿಲ್ಲಿಸುವುದು ?

೧ನೇ ಹೆಂಗಸು

ಹೇಳುತ್ತಾ ಇದ್ದರೂ ತುಂಬುತಾಲೇ ಇದೀಯಲ್ಲಪ್ಪಾ!

ದೊಡ್ಡ

ನಾನೇನುಮಾಡಲಿ! ಅಲ್ಲಿ ನೋಡು ! ಆ ಯಮದೂತ ಇಲ್ಲೇ ನೋಡುತ್ತಿದ್ದಾನೆ !

ಹೆಂಗಸರು

ನೋಡುತ್ತಿದ್ದರೆ ಭಯವೇನು! ನಾವು ಆಟ ಆಡುತ್ತಿಲ್ಲ! ಬೆಳಗಿನಿಂದ ಒಂದೇ ಸಮನಾಗಿ ಕೆಲಸ ಮಾಡುತ್ತಾ ಇರುವೆವು.

ದೊಡ್ಡ

ಮುಕ್ಕಾಲುಮಂಕರಿಯಷ್ಟುಮಾತ್ರ ತುಂಬಿ ಹೊರಸುವನು.

ಕಾರಕ

ಮುಂದೆ ದೊಡ್ಡನಿದ್ದಲ್ಲಿಗೆ ಬಂದು

ಲೇ ! ಕೂಲಿ ! ................

ಯಾಕೆ ಮಂಕರಿಯ ತುಂಬಾ ತುಂಬಲಿಲ್ಲ ?

ಹೆಂಗಸರ ಹತ್ತರ ಆಟವಾಡುವುದಕ್ಕೆ ಬಂದಿದ್ದೀಯಾ!

ದೊಡ್ಡ

ಪಾಪ ! ಬೆಳಗಿನಿಂದ ಕೆಲಸಮಾಡುತ್ತಿರುವರು. ಹೊತ್ತೂ ಆಯಿತು. ಕಾಲು ಸುಡುತ್ತಿದೆ. ಆಗಲೇ ಕೆಲಸ ಬಿಡುವ ಹೊತ್ತಾಯಿತು.

ಕಾರಕ

ಹರಟೆಯನ್ನು ನಿಲ್ಲಿಸು ! ಹೇಳಿದಷ್ಟು ಕೆಲಸಮಾಡು ! ಹೊತ್ತಾಯಿತೋ ಇಲ್ಲವೋ ನನಗೆ ಗೊತ್ತು !

ಹತ್ತಿರದಲ್ಲಿದ್ದ ದೊಡ್ಡನ ತಿಂಡಿಗಂಟನ್ನು ನೋಡಿ ಕಾಲಿಂದ ಒದ್ದು

ಓಹೋ ! ಆಗಲೇ ರೊಟ್ಟೀಗಂಟು ಬಂದುಬಿಟ್ಟಿತೋ !

ಹೆಂಗಸನ್ನು ಕುರಿತು

ಲೇ ! ಮಂಕರಿಯನ್ನು ತೆಗೆದುಕೊಂಡು ಬಾ ! ಬರಿಯಮಂಕರಿಯನ್ನು ಹೊತ್ತು ಓಡಾಡುವುದಕ್ಕಲ್ಲ ನಿಮಗೆ ಕೂಲಿ ಕೊಡುವುದು.

ಕೋಪದಿಂದ ಹೆಂಗಸರು ಮಂಕರಿಗಳನ್ನು ತಂದು ಮುಂದಿಟ್ಟು

ಹೆಂಗಸರು

ನೋಡು ! ಬರೀ ಮಂಕರಿಗಳಲ್ಲ !

ಕಾರಕ

ಲೇ ಕೂಲಿ ! ಹೂ— ! ತುಂಬು ತುಂಬಾ !......

ದೊಡ್ಡ

ಮೌನವಾಗಿ ನಿಂತಿರುವನು

ಕಾರಕ

ಹೇಳಿದ್ದುದು ಕೇಳುವುದಿಲ್ಲವೆ ? ತುಂಬು!

ಚಾವಟಿಯಿಂದ ಹೊಡೆದು

ತುಂಬುವೆಯೋ ಇಲ್ಲವೋ !

ಹೆಂಗಸರು

ಸುಮ್ಮನೇ ಅವನನ್ನೇಕೆ ಹೊಡೆಯುವೆ !

ಕಾರಕ

ಮುಚ್ಚು ಬಾಯಿ ! ಕೈಲಾದರೆ ಕೆಲಸಮಾಡಿ ! ಇಲ್ಲದಿದ್ದರೆ ಬಿಟ್ಟುಹೋಗಿ.

ದೊಡ್ಡನು

ಮತ್ತೆ ಮಾತನಾಡದೆ ಕಣ್ಣೀರು ಹಾಕುತ್ತಾ ಮಂಕರಿ ತುಂಬಾ ತುಂಬಿ ಹೊರಿಸುವನು. ಹೆಂಗಸರು ಮೆಲ್ಲಗೆ ಮಾತನಾಡಿಕೊಂಡು ಕಾರಕನನ್ನು ಶಪಿಸುತ್ತಾ ಹೋಗುವರು.

ಕಾರಕ

ಹುಷಾರ್! ಇನ್ನುಮೇಲೆ ಹೀಗೆಮಾಡಿದರೆ ನಿನ್ನನ್ನು ಸಜಾಮಾಡುವೆನು.

ಮುಂದೆಹೋಗಿ ಶಿಳ್ಳೆಯನ್ನೂದುವನು. ಕೆಲಸ ನಿಲ್ಲುವುದು. ಕೆಲವರು ಹೋಗುವರು. ಮತ್ತೆ ಕೆಲವರು ಮಂಕರಿಗಳನ್ನು ಇಟ್ಟು ರೊಟ್ಟಿಯ ಗಂಟುಗಳನ್ನು ತೆಗೆದುಕೊಂಡು ಮರೆಗೆ ಹೋಗುವರು. ಕಾಳಯ್ಯನೂ ದೇವಿಯೂ ಒಂದು ರೊಟ್ಟಿಗಂಟು ತೆಗೆದುಕೊಂಡು ಹಿಂಭಾಗದ ಮರದಕೆಳಗೆ ಹೋಗಿ ಕೂತುಕೊಳ್ಳುವರು.

ದೊಡ್ಡಯ್ಯನು ದುಃಖದಿಂದ ಕಣ್ಣೀರು ಸುರಿಸುತ್ತ ಆ ಗಂಟನ್ನು ತೆಗೆದು ಮಣ್ಣು ಕೊಡವಿ, ಅದನ್ನು ಬಿಚ್ಚಿ,ರೊಟ್ಟಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು !

ತನ್ನಲ್ಲಿ ತಾನೇ

ಚಾಕರಿ ಮಾಡುವುದರಲ್ಲೂ ಈ ಮದವೆ!

ಈ ಅಹಂಕಾರವೇಕೆ! ನನ್ನ ಅನ್ನವು ಇವನ ಕಾಲ ಕಸವಾಯಿತೆ! ಛೀ! ಪಾಪಿ! ನೀನೇನು ಮಾಡಿದೆ ಎಂಬುದರ ಜ್ಞಾನವೇನಾದರೂ ಉಂಟೆ!

ಆ ಹೆಂಗಸರು ಈ ಉರಿಬಿಸಿಲಿನಲ್ಲಿ ಒಂದೇ ಸಮನಾಗಿ ಕೆಲಸ ಮಾಡಿದರೂ ನಿನಗೆ ದಯವಿಲ್ಲವಾಯಿತೇ!

ಸತ್ಯವನ್ನು ಹೇಳಿ ಸರಿಯಾದ ಮಾರ್ಗವನ್ನು ತೋರಿಸಿದರೆ, ನನಗೆ ಚಾವಟಿಯ ಏಟು!

ಅಧಿಕಾರಮದವೇ ಹೀಗೆ!

ಆಗಲಿ, ಆಗಲಿ. ಇದೆಷ್ಟು ದಿನ ನಡೆಯುವುದೋ ನೋಡುವೆನು !

ಮತ್ತೆ ರೊಟ್ಟಿಯನ್ನು ನೋಡಿ

ಉಪವಾಸವಿದ್ದರೂ ಸರಿ; ಆ ಪಾಪಿಯು ಕಾಲಲ್ಲಿ ತುಳಿದುದನ್ನು ತಿನ್ನುವುದಿಲ್ಲ! ನೀರು ಕುಡಿದೇ ಹೊಟ್ಟೆ ತುಂಬಿಕೊಳ್ಳುವೆನು.

ನೀರ ಮಡಕೆಯನ್ನು ತೆಗೆದುಕೊಂಡು ನೀರುಕುಡಿಯುವನು.

ದೇವಿ.

ದೇವಿಯು ಗಂಟುಬಿಚ್ಚಿ ತಂದೆಗೆ ರೊಟ್ಟಿಯನ್ನುಕೊಟ್ಟು ದೊಡ್ಡಯ್ಯನ ಮಾತನ್ನು ಕೇಳುತ್ತಿರುವಳು.

ತಂದೆಯನ್ನು ಕುರಿತು

ಅಪ್ಪಾ! ಅಪ್ಪಾ! ದೊಡ್ಡಯ್ಯನ ರೊಟ್ಟಿಯನ್ನು ಕಾರಕನು ತುಳಿದ. ದೊಡ್ಡಯ್ಯನು ಅದನ್ನು ಎಸೆದುಬಿಟ್ಟ.

ತಿನ್ನುವುದಕ್ಕೆ ಅವನಿಗೆ ಏನೂ ಇಲ್ಲ!

ಇದನ್ನಾದರೂ ತೆಗೆದುಕೊಂಡು ಹೋಗಿ ಕೊಡು.

ಎಂದು ತನ್ನ ಕೈಲಿದ್ದ ರೊಟ್ಟಿಯನ್ನು ಕೊಡಲು ಬರುವಳು.

ಕಾಳಯ್ಯ.

ಅಯ್ಯೋ ಪಾಪ! ತಬ್ಬಲಿ ಹುಡುಗ.

ಆ ಪಾಪಿಗೇನು ಬಂತು ರೊಟ್ಟಿಯನ್ನು ತುಳಿಯಲು. ನನ್ನ ಪಾಲಿನ ರೊಟ್ಟಿಯೇ ಇದೆ ; ಕೊಡುವೆನು. ನೀನು ತಿನ್ನು ತಾಯಿ.

ಉಳಿದಿದ್ದ ರೊಟ್ಟಿಯನ್ನು ತೆಗೆದುಕೊಂಡುಬಂದು ಕೊಡುವನು.

ತೆಗೆದುಕೋ! ದೊಡ್ಡ ಈ ರೊಟ್ಟಿಯನ್ನು ತಿನ್ನು.

ದೊಡ್ಡಯ್ಯ

ಹೊಟ್ಟೆ ತುಂಬಿದೆ ಮಾವ. ನೀನು ತಿನ್ನು.

ಕಾಳಯ್ಯ

ದೇವಿಯು ಇದನ್ನು ಕಳುಹಿಸಿದಳು, ನಿನ್ನ ರೊಟ್ಟಿಯನ್ನು ಕಾರಕನು ತುಳಿದನಂತೆ. ಅವನೊಬ್ಬ ಪಾಪಿ!

ತೆಗೆದುಕೊಂಡು ತಿನ್ನು. ಇನ್ನು ಹೊತ್ತುಮುಳುಗುವವರೆಗೂ ದುಡಿಯಬೇಕು. ಹೊಟ್ಟೆಗಿಲ್ಲದಿದ್ದರೆ ಕೆಲಸ ಮಾಡುವುದಾದರೂ ಹೇಗೆ!

ದೊಡ್ಡಯ್ಯ

ಆ ರೊಟ್ಟಿಯನ್ನು ತೆಗೆದುಕೊಂಡು

ಹೌದು. ಆ ಕಾರಕನು ನನ್ನ ರೊಟ್ಟಿಯನ್ನು ತುಳಿದನು. ಅಷ್ಟು ಮಾತ್ರವೇ ಅಲ್ಲ. ಕ್ವಾರೆಯ ತುಂಬಾ ಕಲ್ಲು ತುಂಬಲಿಲ್ಲವೆಂದು ನನ್ನನ್ನು ಹೊಡೆದ. ಅಲ್ಲೇ ಅವನ ಕತ್ತು ಮುರಿಯಬೇಕೆನಿಸಿತು. ಅದಕ್ಕೆ ಕಾಲಬರಲೆಂದು ಸುಮ್ಮನಾದೆ.

ಕಾಳಯ್ಯ

ಅಪ್ಪಾ ಅವರಲ್ಲಿ ಹಣವಿದೆ, ನಾವು ನಮ್ಮನ್ನು ಮಾರಿಕೊಂಡಿರುವಾಗ ಮಾಡುವುದೇನು ?

ನನ್ನ ಹುಡುಗಿಯನ್ನು ಗಿಣೀಬೆಳೆಸಿದಹಾಗೆ ಬೆಳೆಸಿದ್ದೆ. ಈಗ ನೋಡು, ಆ ನನ್ನ ಅರಿಯದ ಕಂದನ ಕೈಲಿ ಮಣ್ಣನ್ನು ಹೊರಸುತ್ತಿದ್ದೇನೆ!

ಅಷ್ಟಾದರೂ ಮಾನವಾಗಿರಲು ಗತಿಯಿಲ್ಲ. ಆ ಸೇಟು ಬಲು ಕೆಟ್ಟವನು. ಎಷ್ಟೋ ಹೆಣ್ಣುಮಕ್ಕಳನ್ನು ಕೆಡಿಸಿದ್ದಾನೆ. ನಮ್ಮ ದೇವೀಯನ್ನೂ ಕೆಡಸಬೇಕೆಂದು ಪ್ರಯತ್ನ ಮಾಡುತ್ತಿದಾನೆ! ನಾನೇನುಮಾಡಲಿ! ಕೆಲಸ ಬಿಟ್ಟರೆ ಗತಿಯಿಲ್ಲ! ಇದ್ದರೆ ಮಾನಹಾನಿ!

ದೊಡ್ಡಯ್ಯ

ಅದು ನಮ್ಮ ತಪ್ಪು! ಕೊಟ್ಟ ಕೂಲಿಗೆ ತಕ್ಕ ಕೆಲಸ

ಮಾಡಬಹುದು. ಆದರೆ ನಮ್ಮನ್ನು ಮಾರಿಕೊಂಡಿರುವೆವೆಂದೇಕೆ ತಿಳಿಯಬೇಕು ?

ಆ ಚಂಡಾಲರ ದುಷ್ಕೃತ್ಯಕ್ಕೆ ಎಡೆಗೊಡುವವರು ನಾವೇ ! ಕೂಲಿ ಕೊಡುವನೆಂದು ನಮ್ಮ ಹೆಣ್ಣುಮಕ್ಕಳ ಮಾನವನ್ನು ಮಾರುವುದೇ ! ಉಪವಾಸ ಸತ್ತರೂ ಚಿಂತೆಯಿಲ್ಲ !............

ಮಾವಾ ! ನೀನು ಚಿಂತಿಸಬೇಡ !

ಅವನು ದೇವಿಯ ಮೇಲೆ ಕೈಯಿಟ್ಟರೆ ಅವನ ಪ್ರಾಣವನ್ನು ತೆಗೆದುಬಿಡುವೆನು.

ಎಂತಹ ಕಷ್ಟವನ್ನಾದರೂ ಸಹಿಸಬಲ್ಲೆ. ಆದರೆ ಹೆಣ್ಣುಮಕ್ಕಳ ಮಾನಹಾನಿಯನ್ನು ನೋಡಲಾರೆ !

ಕಾಳಯ್ಯ

ದೊಡ್ಡ ! ಅವರು ಬಲಿಷ್ಠರು ಏನೂಮಾಡುವುದಕ್ಕೂ ಹೇಸುವುದಿಲ್ಲ ! ಅಂತೂ ನಿನ್ನ ಸಹಾಯವಿದ್ದರೆ ಹೆದರುವರು. ಅಗೋ ! ಅಲ್ಲಿ ನೋಡು. ನಾನು ಹತ್ತಿರವಲ್ಲಿಲ್ಲದಿರುವುದನ್ನು ತಿಳಿದು ಆ ದುರುಳರು ದೇವಿಯ ಬಳಿಗೆ ಬರುತ್ತಿರುವರು.

ದೊಡ್ಡಯ್ಯ

ಬರಲಿ, ಬರಲಿ, ನೋಡೋಣ ಸುಮ್ಮನಿರು !

ಇಬ್ಬರೂ ಕೊಂಚ ಮರೆಯಾಗಿ ನೋಡುವರು. ದೇವಿಯು ರೊಟ್ಟಿಯನ್ನು ತಿಂದು, ಹತ್ತಿರದ ಗಿಡಗಳಲ್ಲಿ ಹೂಗಳನ್ನು ಕಿತ್ತು ಹಾಡು ಹೇಳುತ್ತ ಹೂ ಕಟ್ಟುತ್ತಿರುವಳು.

ಕುಮಾರ ಮತ್ತು ಕಾರಕ ಇಬ್ಬರೂ ಪ್ರವೇಶಿಸುವರು.

ಕುಮಾರ

ಅವಳನ್ನು ಹೇಗಾದರೂ ಒಪ್ಪಿಸಿ ಕರತರಲು ಸೇಟರು ಹೇಳಿಕಳುಹಿಸಿರುವರು.

ನೀನು ಪ್ರಯತ್ನಮಾಡಿದರೆ ಇದೆಷ್ಟರ ಕೆಲಸ!

ಕಾರಕ

ಇದು ಅಷ್ಟು ಸುಲಭದ ಮಾತಲ್ಲ.

ಈ ಹೆಂಗಸರಿಗೆ ತಿನ್ನಲು ಹೊಟ್ಟೆಗಿಲ್ಲದಿದ್ದರೂ ಹೆಮ್ಮೆ ಬಹಳ.

ನಾನು ಪ್ರಯತ್ನ ಮಾಡಿನೋಡಿದೇನೆ! ಬಗ್ಗುವಂತಿಲ್ಲ! ಆ ದೊಡ್ಡ ಬಂದಮೇಲಂತೂ ಜನವು ಕೊಬ್ಬಿಹೋಗಿದಾರೆ. ನನ್ನನ್ನು ಕಂಡರೆ ಹೆದರುತ್ತಿದ್ದವರು ಈಗ ಮಾತಿಗೆ ಮಾತು ಜವಾಬು ಕೊಡುವರು. ಅವನಿಂದ ನಮ್ಮ ಆಟ ಏನೂ ನಡೆಯುವಂತಿಲ್ಲ.

ಕುಮಾರ

ಅಲ್ಲಿ ನೋಡು! ಈಗ ಅವಳ ಹತ್ತರ ಯಾರೂ ಕಾಣುವುದಿಲ್ಲ. ಆ ಮುದಿ ಕೂಡ ಹತ್ತಿರ ಇಲ್ಲ! ಬಾ ಹೋಗಿ ಕೊಂಚ ಆಟ ತೋರಿಸಿದರೆ ಬಲೆಗೆ ಬೀಳುವಳು.

ಸ್ಪೋರ್ಟ್ ಹೆಸರು ಹೇಳಿದರೆ ಒಪ್ಪದೇ ಇರುವವರು ಯಾರು? ಅಲ್ಲದೆ ನಿನಗೆ ಹೆದರುತ್ತಾರೆ!

ಕಾರಕ

ನಾನಲ್ಲ! ಯಾರು ಬಂದರೂ ಅವಳು ಹೆದರುವುದಿಲ್ಲ!

ನಾನು ಆಗಲೇ ಪ್ರಯತ್ನ ಮಾಡಿ ಆಗಿದೆ. ನನ್ನ ಉಪಾಯ ಏನೂ ಅವಳ ಹತ್ತಿರ ನಡೆಯುವುದಿಲ್ಲ!

ಕುಮಾರ

ಏನುಮಾಡುವುದು! ನೀವು ಹೇಳಿದಮೇಲೆ ಆಗುವುದಿಲ್ಲ ಅನ್ನುವುದು ಹೇಗೆ! ಉಪಾಯವಾಗಿ ಹೇಳಿ ನೋಡುವುದು; ಅದು ಸಾಧ್ಯವಾಗದೇ ಇದ್ದರೆ ಗೊತ್ತೇ ಇದೆ........ಅಂತೂ ನೀವು ಸಹಾಯಮಾಡಿದರೆ ಸ್ಪೋರ್ಟಿಗೆ ತುಂಬಾ ಸಂತೋಷವಾಗುತ್ತೆ.

ಬಾ ಹೋಗೋಣ!

ಇಬ್ಬರೂ ದೇವಿಯಿದ್ದೆಡೆಗೆ ಬರುವರು.

ಕಾರಕ.

ದೇವಿ! ಏನು ಒಬ್ಬಳೇ ಕುಳಿತಿರುವೆ!

ಎಷ್ಟು ಸೊಗಸಾಗಿ ಹೂ ಕಟ್ಟಿರುವೇ?

ಕುಮಾರ.

ಇದನ್ನು ನಮ್ಮ ಸೇಟರಿಗೆ ಕೊಟ್ಟರೆ ತುಂಬಾ ಸಂತೋಷಪಟ್ಟು ಬೇಕಾದ್ದು ಕೊಡುವರು!

ಕಾರಕ

ಹೌದು! ಹೌದು! ಅವರಿಗೆ ಇಂತಹದು ಸಿಕ್ಕಿದರೆ ತುಂಬಾ ಸಂತೋಷ!

ದೇವೀ! ಇಲ್ಲಿ ನೋಡು ಸೇಟ್‌ಜಿಯವರು ನಿನಗಾಗಿ ಇಷ್ಟೊಂದು ಹಣ್ಣುಗಳನ್ನು ಕಳುಹಿಸಿರುವರು. ತೆಗೆದುಕೋ!

ಕುಮಾರನಲ್ಲಿದ್ದ ವಸ್ತ್ರದಗಂಟು ಬಿಚ್ಚಿ ಹಣ್ಣುಗಳನ್ನು ಕೊಡಲು ಹೋಗುವನು. ದೇವಿಯು ಅಸಮಾಧಾನದಿಂದ ಹೂಗಳನ್ನು ಮಡುಲಲ್ಲಿ ಹಾಕಿಕೊಂಡು ಹಿಂದೆ ಸರಿದು

ದೇವಿ.

ನನಗೆ ಬೇಕಿಲ್ಲ! ........ಹೋಗಿ!

ಕುಮಾರ

ಸೇಟ್‌ಜೀಯವರು ಕಳುಹಿಸಿದ್ದನ್ನು ತಿರಸ್ಕರಿಸಬಾರದು! ಅವರು ನಿನ್ನಲ್ಲಿ ತುಂಬಾ ಪ್ರೀತಿಯಿಟ್ಟಿರುವರು.

ನೀನು ಅವರ ಇಷ್ಟದಂತೆ ಇದ್ದರೆ ಬೇಕಬೇಕಾದ ವಡವೆ ವಸ್ತುಗಳನ್ನು ತಂದು ಕೊಡುವರು! ಈಕೂಲಿಯ ಕೆಲಸ ತಪ್ಪುವುದು. ನಿನೊಬ್ಬ ಐಶ್ವರ್ಯ

ವಂತಳಾಗುವೆ! ನಿಮ್ಮ ತಂದೆಯೂ ಸುಖವಾಗಿರು ವನು.

ದೇವಿ!

ಗಂಡಸರು ಹತ್ತಿರದಲ್ಲಿಲ್ಲದುದನ್ನು ನೋಡಿ ಬಂದು ಹರಟಬೇಡಿ! ಹೋಗಿ.

ನನಗೆ ಅವನ ಒಡವೆಯೂ ಬೇಡ ಸೀರೆಯೂ ಬೇಡ. ನಾನು ಅವನು ಹೇಳಿದಹಾಗೆ ಕೇಳುವುದೂ ಇಲ್ಲ! ಇಲ್ಲಿ ಹೆಚ್ಚು ಮಾತನಾಡದೇ ಹೊರಟುಹೋಗಿ!

ಕುಮಾರ!

ಹೀಗೆ ಒರಟಾಟಮಾಡುವುದರಿಂದ ಪ್ರಯೋಜನ ವಿಲ್ಲ! ನೀನು ಅವರ ಕೆಲಸದಲ್ಲಿದ್ದು ಅವರಿಂದ ಕೂಲಿ ಯನ್ನು ಪಡೆದು ಜೀವಿಸುತ್ತಿರುವೆ! ನೀನಾಗಿ ಒಪ್ಪಿ ದ್ದರೆ ನಾವಾಗಿ ಕರೆದುಕೊಂಡು ಹೋಗುವೆವು. ಈ ಪೊಂಡಾಟವನ್ನು ಬಿಟ್ಟು ಸುಮ್ಮನೇ ನಾನು ಹೇಳುವು ದನ್ನು ಕೇಳು!

ದೇವಿ!

ನಾನು ನಿಮ್ಮ ಮಾತನ್ನು ಕೇಳುವುದಿಲ್ಲ! ಏನು ಮಾಡಿದರೂ ಕೇಳುವುದಿಲ್ಲ!

ಕಾರಕ

ಎಷ್ಟೋ ಪುರಾಣಹೇಳುವುದು. ಹೋಗಿ ಎತ್ತು ಕೊ! ನೋಡೋಣ ಏನುಮಾಡತಾಳೆ!

(ಕುಮಾರನು ದೇವಿಯನ್ನು ಎತ್ತಿಕೊಳ್ಳಲು ಮುಂದರಿಯು ವನು ಕಾರಕನು ಹಿಂಬಾಲಿಸುವನು)

ದೇವಿ

ಗಾಬರಿಯಿಂದ ಹಿಂದಕ್ಕೆ ಓಡಲು ಪ್ರಯತ್ನಿಸುತ್ತಾ

ಅಪ್ಪಾ! ಅಪ್ಪಾ! ದೊಡ್ಡಯ್ಯ! ದೊಡ್ಡಯ್ಯ!

ದೊಡ್ಡಯ್ಯನೂ ಕಾಳಯ್ಯನೂ ಓಡಿಬಂದು ಇವರಿಬ್ಬರನ್ನೂ ಹಿಡಿಯಲೆತ್ನಿಸುವರು. ಕೈಕೈ ಸೇರುವುದು.

ಕುಮಾರನು ತಪ್ಪಿಸಿಕೊಂಡು ಓಡುವನು. ಕಾರಕನಿಗೆ ಕೊಂಚ ಏಟುಬೀಳುವುದು. ಬಳಿಕ ಕಾರಕನು ದೊಡ್ಡಯ್ಯನನ್ನು ಕೆಳಗೆ ಕೆಡವಿ ತುಳಿದು ಚಾವಟಿಯಿಂದ ಹೊಡೆಯುವನು. ಅವನು ಮೂರ್ಛೆ ಹೋಗುವನು. ಬಳಿಕ ಕಾರಕನೂ ಹೊರಟುಹೋಗುವನು.

ದೇವಿ

ದೇವಿಯು ಗಾಬರಿಯಿಂದ

ಅಯ್ಯೋ! ಅಯ್ಯೋ!

ದೊಡ್ಡಯ್ಯನನ್ನು ಸಾಯಿಸಿದರು! ಬನ್ನಿ! ಬನ್ನಿ!

ಕೂಗಿಕೊಳ್ಳುವಳು.

ಕೆಲಸಗಾರರು

ಯಾರು! ಎಲ್ಲಿ! ಎಲ್ಲಿ! ........................

ಓಡಿಬರುವರು.

(ತೆರೆ ಬೀಳುವುದು)

---

## ಅಂಕ ೧. ನೋಟ ೩.

ಕೂಲಿಕಾರರು ವಾಸಮಾಡುವ ಗುಡಿಸಲುಗಳ ಸಮೀಪ.

ಇಬ್ಬರು ಪೋಲೀಸಿನವರು ಪುರಜನರಂತೆ ಉಡಿಗೆಯುಟ್ಟು ಪ್ರವೇಶಿಸುವರು.

೧ನೆಯ ಪೋಲೀಸಿನವನು

ಇದೇಸ್ಥಳವಿರಬೇಕು! ಅವನನ್ನು ನೋಡುವುದಕ್ಕೆ ಮೊದಲು ಇಲ್ಲಿ ಯಾರನ್ನಾದರೂ ವಿಚಾರಿಸಿ ಸಂದರ್ಭ ತಿಳಿದುಕೊಂಡು ಹೋದರೆ ಒಳ್ಳೆಯದು.

೨ನೆಯ ಪೋಲೀಸಿನವನು

ಅಗೋ! ಅಲ್ಲಿ ನೋಡು! ಯಾರೋ ಸೌದೆ ಹೊರೆಯನ್ನು ಹೊತ್ತುಕೊಂಡು ಹೋಗುತ್ತಿದಾನೆ.

ಅವನನ್ನು ಇಲ್ಲಿ ಹಿಡಿದುಕೊಂಡು ಬಾ!

೧ ನೆಯವನು

ಆಗಲೀ! ಎಳಕೊಂಡು ಬರುತ್ತೇನೆ!

ಲೇ!!! ಸೌದೇ! ಬಾ ಇಲ್ಲ

ಮರೆಯಾಗುವನು

೨ನೆಯವನು

ಜೋಬಿನಿಂದ ಕಾಗದವನ್ನು ತೆಗೆದು ಓದಿಕೊಳ್ಳುತ್ತಿರುವನು.

೧ ನೆಯವನು

ಸೌದೆಯ ಹೊರೆ ಹೊತ್ತವನನ್ನು ಕೈಹಿಡಿದು ಎಳೆದುಕೊಂಡು ಬಂದು ನಿಲ್ಲಿಸುವನು.

ಬಂದಿದಾನೆ, ವಿಚಾರಿಸಿ!

ಸೌದೆಯವನು

ಗಾಬರಿಯಿಂದ ಹೊರೆಯನ್ನು ಕೆಳಗೆಹಾಕಿ ಕೈಮುಗಿದುಕೊಂಡು,

ಯಾಕೆ ಬುದ್ಧೀ ನನ್ನ ಹಿಡಕೊಂಡು ಬಂದಿರಿ!

ಕಾಡಿನಲ್ಲೆಲ್ಲಾ ಅಲೆದು ನಾಕು ಪುರಲೇ ಕಟ್ಟಿಕೊಂಡು ಬಂದೆ, ಅಪ್ಪಾ! ಬಿಟ್ಟುಬಿಡಿ ಬುದ್ಧಿ, ಕಾಲಿಗೆ ಬೀಳುತೀನಿ!

೨ ನೆಯುವನು

ಈ ಕಾಡೆಲ್ಲಾ ಸರಕಾರಕ್ಕೆ ಸೇರಿದ್ದೆಂದು ಗೊತ್ತಿಲ್ಲವೆ!

ಕೆಲಸಗಾರ

ಹಾಗಾದರೆ ಬಡವರು ಬದಕೋದು ಹ್ಯಾಗೆ ಸ್ವಾಮಿ! ಆರಂಬ ಮಾಡೋವ ಅಂದ್ರೆ ಮಳೆಬೆಳೆ ಸರಿಯಾಗಿ ಆಗೋಲ್ಲ! ಕಂದಾಯ ಕೊಡೋಕೆ ಇಲ್ಲದೆ ಹೊಲಗದ್ದೆ ಎಲ್ಲಾ ಹರಾಜಾಗಿ ಹೋಯ್ತು.

ಈ ಕಾಡಲ್ಲಿ ಸೌದೆ ಆರಿಸಿತಂದು ಮಾರಿ ಗಂಜೀ ನಾರೂ ಕುಡಿಯೋಣ ಅಂದರೆ ಇದಕ್ಕೂ ತಡೇನಾ!

ಮಕ್ಕಳೂ ಮರಿಗಳೂ ಹೊಟ್ಟೆಗಿಲ್ಲದೆ ಹೊಡಕೊಳ್ಳು ತ್ತಿವೆ. ನಮ್ಮ ಗೋಳು ಕೇಳೋರು ಯಾರು! ಆ ದೇವರೂ ಕಣ್ಣುಮುಚ್ಚಿಕೊಂಡವನೆ!

೨ ನೆಯುವನು

ನಿನಗೇನುರೋಗಬಂದಿದೆ! ಕೂಲಿಮಾಡಿ ಜೀವಿಸ ಬಾರದೆ!

ನಿಮ್ಮ ಊರ ಹತ್ತಿರದಲ್ಲೇ ಬೇಕಾದಷ್ಟು ಕೆಲಸ ನಡಿಯುತ್ತಿದೆಯಲ್ಲ!

ಸೌದೆಯುವ

ನಾವು ಕೆಲಸಮಾಡೋಕೆ ಹಿಂತೆಗೆಯೊಲ್ಲ!

ನಾವೆಲ್ಲಾ ಕೆಲಸಮಾಡೋರೇ!

ಆದರೆ ಸರಿಯಾದ ಕೆಲಸ ಕೊಡೋರು ಆಗಬೇಕಲ್ಲ.

ನಮ್ಮೂರ ಹತ್ತಿರದಂತಹ ಹಾಳುಕೆಲಸ ಮಾಡೋದಾರೂ ಹ್ಯಾಗೆ ಬುದ್ಧಿ!

ಅದೂ ನಿಂತು ಆರುದಿನವಾಯಿತು!

೨ ನೆಯುವ

ಯಾಕೆ ನಿಂತುಹೋಯಿತು. ಅವರಾಗಿ ನಿಲ್ಲಿಸಿದರೋ! ನೀವೇ ಕೆಲಸಕ್ಕೆ ಹೋಗಲಿಲ್ಲವೋ!

ಸೌದೆಯುವ

ನಾವೇ ಹೋಗಲಿಲ್ಲ! ಆ ಕೂಲೀನೂ ಸಾಕು, ಆ ಕಷ್ಟಾನೂ ಸಾಕು!

೨ ನೆಯುವ

ಅಂತಹ ಕಷ್ಟವೇನು ಬಂತು!

ಸೌದೆಯುವ

ಅದು ಜ್ಞಾಪಕ ಬಂದರೆ ಅಳೂಬರುತ್ತೆ!

ಆ ಸೇಟು ಬಂದಹೊಸದರಲ್ಲಿ ಒಳ್ಳೇಮಾತಾಡಿ, ಆಶೆ ತೋರಿಸಿ, ಮೀನಿಗೆ ಗಾಳಾ ಹಾಕಿದಹಾಗೆ ನಮ್ಮನ್ನೆಲ್ಲಾ ಹಿಡಕೊಂಡು ಬಂದ.

ಬರತಾಬರತಾ ಅವನು ಕೊಡೋಕಷ್ಟ ತಡೆಯೋದೇ ಕಷ್ಟವಾಗಿದೆ.

ಹೊತ್ತುಮೂಡಿದಾಗ ಕೆಲಸದ ಮೇಲೆ ಹೋದರೆ ಕತ್ತಲಾಗೋತನಕ ಕೆಲಸ. ಇಷ್ಟುಮಾಡಿದರೂ ಹೊಟ್ಟೆ ತುಂಬಾ ಕೊಡೊಲ್ಲ. ಮಾತಾಡದ್ರೆ ಏಟು!

ಅವನ ಮೇಸ್ತ್ರೀ ಒಬ್ಬ ರಾಕ್ಷಸ!

ಒಳ್ಳೇಮಾತೂ ಅನ್ನೋದಿಲ್ಲ! ಮಾ ತಾ ಡೋ ಕೆ ಮೊದಲು ಚಾವಟಿಯ ಏಟು.

ಆ ಸೇಟೋ........ಅವನ ಚಾಲೂ ಚೆನ್ನಾಗಿಲ್ಲ!

೧ನೆಯುವನು

ಹಾಗಂದರೆ ?........

ಸೌದೆಯುವ

ಇಲ್ಲಿ ಕೆಲಸಮಾಡೋ ಎಷ್ಟೋ ಹೆಣ್ಣುಹುಡುಗರನ್ನು ಕೆಡಸಿಬಿಟ್ಟಿದಾನೆ.

ಸಾಲಾಕೊಟ್ಟು ಬಡ್ಡಿಗೆಬಡ್ಡಿ ಬೆಳಸಿ ಎಷ್ಟೋ ಮನೇ ಹಾಳಮಾಡಿದಾನೆ!

ಅಯ್ಯೋ ! ಅವನ ಮನೆ...........

ನಿಟ್ಟುಸುರು ಬಿಟ್ಟು

ಅದ್ಯಾಕೇ ಕೇಳಿತೀರಿ ಬುದ್ಧೀ !

ಒಂದೇ ಎರಡೇ ಅವನ ಕತೆ. ರಾವಣನ ಕತೆಗಿಂತ ದೊಡ್ಡದು.

ಾನೆಯುವ

ನಿಮುಗೆಷ್ಟೋ ಜಂಭ !

ಮನೇಲಿ ತಿನ್ನೋಕೆ ಹಿಟ್ಟಿಲ್ಲ, ಮಕ್ಕಳಿಗೆ ಗಂಜಿಗಿಲ್ಲ ಅಂದೆ! ಇಷ್ಟಾದರೂ ನೀವೇ ಕೆಲಸಕ್ಕೆ ಹೋಗಲಿಲ್ಲ! ಅವನ ಚಾಲು ಸರಿಯಾಗಿಲ್ಲದಿದ್ದರೆ ನಿಮುಗೆಲ್ಲಾ ಏನು ಬಂತು ಕಷ್ಟ !

ಸೌದೆಯುವ !

ಹೊಟ್ಟೆಗಿಲ್ಲ ಅಂತ ಕೆಟ್ಟ ಕೆಲಸ ಮಾಡುತ್ತಾ ಇದ್ದರೆ ನೋಡೀ ಸುಮ್ಮನೇ ಇರೋಕಾಗತದಾ !

ದೇವರು ಒಪ್ಪಬೇಡವಾ !

ಇದು ಹೆಂಗಾರೂಹೋಗಲಿ ಅಂದರೆ ಆ ಕಾರಕನ ಕೈಕೆಳಗೆ ಕೆಲಸ ಮಾಡೋದು ಯಾರಿಗೆ ಸಾಧ್ಯ! ಅವರು ಏನು ಮಾಡಿದರೂ ಸರಿ ಅನ್ನಬೇಕು. ಹೆಚ್ಚು ಮಾತಾಡಿದರೆ ಬಂತು ಕಷ್ಟ.

ಈ ಕಷ್ಟ ಎಷ್ಟು ದಿನ ಸಹಿಸೋದು !

ಾನೆಯುನವ

ಆ ಕಾರಕನ ವಿಷಯ ಬಹುವಾಗಿ ಹೇಳುತ್ತಿರುವೆಯಲ್ಲಾ ! ಏನೋ ಅವನ ತಪ್ಪು !

ಸೌದೆಯುವ

ಅನುಮಾನದಿಂದ ಅವರನ್ನು ನೋಡಿ.

ನನಗೆ ತಿಳಿಯದು ಸ್ವಾಮಿ! ಇನ್ನೂ ಯಾರನ್ನಾದರೂ ಕೇಳಿ! ಗೊತ್ತಾಗತದೆ. ನನ್ನ ಬಿಟ್ಟುಬಿಡಿ ಹೊತ್ತಾಯಿತು. ಏನೋ ಈ ಸೌದೆಗೆ ಮೂರುಕಾಸೊ ಆರುಕಾಸೊ ಸಿಕ್ಕಿದರೆ ತಂದು ಮಕ್ಕಳಿಗೆ ಅಷ್ಟು ಗಂಜೀ ಕಾಯಿಸಿ ಹುಯ್ಯಬೇಕು!

ಗಸೆಯುವ

ಧೈರ್ಯವಾಗಿರು! ನಿನಗೇನೂ ಮಾಡುವುದಿಲ್ಲ!

ಕಾರಕನ ವಿಷಯ ಇನ್ನೇನಾದರೂ ತಿಳಿದಿದ್ದರೆ ಹೇಳು. ನಿನ್ನನ್ನು ಬಿಟ್ಟುಬಿಡುವೆನು.

ಸೌದೆಯುವ

ಅವನ ವಿಷಯ ನಮಗೆ ಯಾಕೆ ಬುದ್ದೀ! ಒಂದು ಮಾತಾಡಿದರೆ ಕಮ್ಮಿ, ಎರಡು ಮಾತಾಡಿದರೆ ಹೆಚ್ಚು!

ನಾನು ಹೇಳಿದೆ ಅಂತ ಅವನಿಗೇನಾದರೂ ತಿಳಿದರೆ ಬಂತು ನನ್ನ ಪ್ರಾಣಕ್ಕೆ!

ಗಸೆಯುವ

ನಾವು ಸರಕಾರದ ಕಡೆಯವರು. ಧೈರ್ಯವಾಗಿರು. ನಾವು ಯಾರಿಗೂ ಹೇಳುವುದಿಲ್ಲ! ಅವನ ಮೇಲೆ ಅರ್ಜಿ ಬಂದಿದೆ. ಅದನ್ನು ವಿಚಾರಿಸುವುದಕ್ಕೇ ಬಂದಿರುವುದು! ನಿನಗೇನೂ ಭಯವಿಲ್ಲದಹಾಗೆ ನಾವು ನೋಡಿಕೊಳ್ಳುವೆವು. ನಿನಗೆ ತಿಳಿದ್ದನ್ನು ಹೇಳು.

ಸೌದೆಯುವ

ಏನು ಹೇಳಲೀ ಬುದ್ದೀ! ಆಸೇಟು ಬಲೆ ಕೆಟ್ಟೋನು! ಜನಾನ ಗಾಣದಲ್ಲಿ ಹಾಕಿ ಅರೀತಾನೆ. ಸೇಟು ಏನು ಕೆಲಸ ಮಾಡಬೇಕಾದರೂ ಈ ಕಾರಕ ಸಹಾಯ ಮಾಡತಾನೆ. ನಮಗೆ ಕೂಲೀ ಕೊಡೋದೇ ಹೊಟ್ಟೆಗೆ ಸಾಲದು. ಅದರಲ್ಲೂ ಇವನಿಗೆ ಪಾಲು. ಯಾವಾಗಲೂ ಸೇಟಿನ ಹತ್ತಿರ ಚಾಡೀ ಹೇಳೋದು, ಕೂಲಿ ಹಿಡಿ

ಯೋದು! ಗಟ್ಟಿಯಾಗಿ ಮಾತಡದ್ರೆ ಚನ್ನಾಗಿ ಹೊಡದು ಕೆಲಸ ಬಿಟ್ಟು ಓಡಿಸೋದು!

ಅವರಲ್ಲಿ ಕೆಲಸಾ ಮಾಡೋರ ಮಾನ ಕಾಸಿಗೆಕಡೆ. ನಮ್ಮ ಹೆಂಗಸರನ್ನು ಅನ್ನೋದು ಕಿವೀಲಿ ಕೇಳೋಕೆ ಆಗೋಲ್ಲ.

ಒಳ್ಳೊಳ್ಳೇ ಹುಡುಗೀರನ್ನೆಲ್ಲಾ ಕೆಡಸಿಬಿಟ್ಟ!

ಪಾಪ! ಕಾಳಪ್ಪನ ಮಗಳು ದೇವಿ! ಇನ್ನೂ ಹರೇದ ಹುಡುಗಿ! ಅವಳನ್ನೂ ಕೆಡಸಬೇಕೂ ಅಂತ, ಸೇಟೂ ಕಾರಕನೂ ಹೊಂಚುಹಾಕಿದರು.

ಹುಡುಗಿ ಒಪ್ಪಲಿಲ್ಲ. ಆ ದೊಡ್ಡಯ್ಯ ಇವರ ಪುಂಡಾಟ ಕಂಡು ಹುಡುಗೀನ ಬಿಡಸೋಕೆ ಹೋದಾಗ ಕಾರಕ ಅವನನ್ನು ಚನ್ನಾಗಿಹೊಡೆದು ತಲೆ ಒಡೆದುಹಾಕಿ ಬಿಟ್ಟದಾನೆ! ಅವನು ಬದುಕೋದೇ ಕಷ್ಟ!

ಆಕಾರಕನ ಸಮಾಚಾರ ಏನು ಹೇಳುತೀರಿ ಬುದ್ದೀ!

ಅವನಿಗೆ ಯಾವ ನರಕ ಇದೆಯೋ ಗೊತ್ತಿಲ್ಲ. ಅಗೊ ನೋಡಿ ಇಲ್ಲೇ ಬರತಾ ಇದಾನೆ! ನಿಮ್ಮ ಪಾದಕ್ಕೆ ಬೀಳತೀನಿ! ನಾನು ಹೇಳಿದೆ ಅನ್ನಬ್ಯಾಡಿ. ಅವನು ಬರೋಕೆ ಮುಂಚೆ ನನ್ನ ಕಳಿಸಿಕೊಡಿ.

೧ನೆಯುವನು

ಆಗಲಿ! ಹೋಗು!

ಸೌದೆಯುವ

ಸೌದೆ ಹೊರೆ ಹೊತ್ತುಕೊಂಡು ಹೋಗುವನು.

೨ನೆಯುವನು

ಕಾರಕನು ಬರುವ ಕಡೆ ನೋಡಿ

ದಿಟವಾಗಿಯೂ ಭಯಂಕರನಾಗಿರುವನು! ಇಲ್ಲೇ ಬರುತ್ತಿರುವಂತಿದೆ! ಏನುಮಾಡುವನೋ ನೋಡೋಣ!

ಕಾರಕ

ಅವರಿಬ್ಬರಿದ್ದಲ್ಲಿಗೆ ಬಂದು ನಿಂತು

ನೀವು ಯಾರು! ಯಾರನ್ನು ಕೇಳಿ ಇಲ್ಲಿ ಬಂದಿರಿ? ಇಲ್ಲೇನು ಹೊಂಚುಹಾಕುತ್ತಿರುವಿರಿ?

೧ನೆಯವ

ಸ್ವಾಮಿ! ನಾವು ವೈದ್ಯರು!

ಇಲ್ಲಿ ಯಾರಿಗೋ ತಲೆ ಒಡೆದುಹೋಗಿದೆಯಂತೆ ವಿಚಾರಿಸಿ ಔಷಧಿ ಕೊಡುವುದಕ್ಕಾಗಿ ಬಂದಿದೇವೆ! ಅವರ ಗುಡಿಸಲೆಲ್ಲಿದೆ ತೋರಿಸಿಕೊಡುತ್ತೀರಾ?

ಕಾರಕ

ಕೋಪಾವಿಷ್ಟನಾಗಿ

ಇಲ್ಲಿ ಯಾರಿಗೂ ಏನೂ ಆಗಿಲ್ಲ. ನೀವು ನಮ್ಮ ಸ್ಥಳಕ್ಕೆ ಪ್ರವೇಶಿಸಕೂಡದು. ಮೊದಲು ಈ ಸ್ಥಳ ಬಿಟ್ಟು ಹೊರಡಿ! ಸಾವಕಾಶಮಾಡಿದರೆ ಕಷ್ಟಕ್ಕೆ ಸಿಕ್ಕುವಿರಿ!

೨ನೆಯವನು

ಹೆದರಿಕೆಯನ್ನು ತೋರ್ಪಡಿಸುತ್ತಾ ಮರೆಯಾಗುವನು.

೧ನೆಯವನು

ನಾವು ಯಾರಿಗೂ ಏನೂ ಕೆಟ್ಟದು ಮಾಡಿಲ್ಲ. ನೀವು ಮನೆಯನ್ನು ತೋರಿಸದಿದ್ದರೆ ನಾವೇ ವಿಚಾರಿಸುವೆವು. ನಾವೇನೂ ಹೊಂಚುಹಾಕುತ್ತಿಲ್ಲ; ಏನನ್ನೂ ಹೊತ್ತುಕೊಂಡೂ ಹೋಗುವುದೂ ಇಲ್ಲ!

ಯಾರೋ ಬಂದು ಹೇಳಿದದ್ದರಿಂದ ನಾವು ಬಂದಿದೇವೆ. ಔಷಧಿ ಕೊಟ್ಟು ಹೊರಟುಹೋಗುತ್ತೇವೆ! ಇದಕ್ಕೆ ನಿಮಗೇಕೆ ಇಷ್ಟು ಸಿಟ್ಟು.

ಕಾರಕ

ರೋಷಾವೇಷದಿಂದ ಮುಂದೆಬಂದು ಆತನ ಕತ್ತಿಗೆ ಕೈ ಹಾಕಿ ಚಾವಟಿಯನ್ನೆತ್ತುವನು.

೨ನೆಯವನು

೨ನೆಯ ಪೋಲೀಸಿನವನು ತನ್ನ ಕೆಲಸದ ದುಸ್ತುಗಳನ್ನು ಧರಿಸಿಕೊಂಡು ಮುಂದೆ ಬಂದು ನಿಲ್ಲುವನು.

ಕಾರಕನು ನೀನೋ! ನಿನ್ನಮೇಲೆ ಒಂದು ಅರ್ಜಿ ಬಂದಿದೆ! ಇಗೋ ಈ ವಾರಂಟು ತೆಗೆದುಕೋ! ನಿನ್ನನ್ನು ಅರೆಸ್ಟುಮಾಡಿರುವೆನು!

ಕಾರಕನ ಆವೇಶವು ಕ್ರಮವಾಗಿ ಇಳಿದು ಕೈಕೆಳಗೆ ಬರುವುದು. ಸಪ್ಪಗೆ ಸುಮ್ಮನೆ ನಿಂತುಕೊಳ್ಳುವನು.

೧ನೆಯುವ

ಏನು! ಸಾಹೇಬರೇ! ನಾನು ಈ ಜಾಗವನ್ನು ಬಿಟ್ಟು ಹೊರಡಬೇಕೋ ಇಲ್ಲವೋ! ಯಾಕೆ! ಚಾವಟಿ ಕೆಳಗಿಳಿಯಿತು!

ಕಾರಕ

ಯಾರೋ ಪೋಲಿಗಳು ಇರಬಹುದೆಂದು ಹಾಗೆಂದೆ! ನೀವೇನೂ ತಿಳಿದುಕೊಳ್ಳಬಾರದು—ನೀವು ಇಂತಹವರೆಂದು ಮೊದಲೇ ತಿಳಿದಿದ್ದರೆ ಚೆನ್ನಾಗಿತ್ತು.

ಪೋಲೀಸಿನವರಿಗೂ ನಮಗೂ ಯಾವಾಗಲೂ ಸ್ನೇಹ!

ನೀವು ನಮ್ಮ ಸೇಟರನ್ನು ನೋಡಿದೀರೋ!

ಪೋಲೀಸಿನವರು

ನಾವು ಬಂದಿರುವುದು ನಿನ್ನನ್ನು ಅರೆಸ್ಟು ಮಾಡುವುದಕ್ಕೆ! ಸೇಟರನ್ನು ನೋಡುವುದಕ್ಕಲ್ಲ!

ಕಾರಕ

ಆಗಬಹುದು! ಅಡ್ಡಿಯಿಲ್ಲ!

ಆದರೆ ನಿಮ್ಮನ್ನು ನೋಡಿದರೆ ಊಟವಾಡಿರುವ ಹಾಗೆ ಕಾಣುವುದಿಲ್ಲ. ಬನ್ನಿ ಊಟವಾಡಿಕೊಂಡು ನಂತರ ಏನು ಬೇಕಾದರೂ ಮಾಡಿ!

ಗನೆಯುವ

ನಿಮ್ಮ ಸೇಟರು ಯಾರು? ಅವರೆಲ್ಲಿರುವರು?

ಕಾರಕ

ಅವರು ಇಲ್ಲೆ ಹತ್ತಿರದಲ್ಲಿರುವರು. ಅವರ ಹೆಸರು ದಾಮೋದರ ಸೇಟರು. ಯಾವ ಕಲೆಕ್ಟರು, ಸೂಪರ್ರೆಟರು ಬಂದರೂ ಸೇಟರಲ್ಲೇ ಇಳಿಯೋದು! ಮೊನ್ನೆ ನಿಮ್ಮ ಇನಸ್ಪೆಕ್ಟರು ಬಂದು ಎರಡುದಿನ ಇದ್ದು ಹೋದರಲ್ಲಾ! ಅವರ ಮಗಳ ಮದುವೆಗೆ ಅಂತ ಈ ಸುತ್ತಿನಲ್ಲಿ ಅಕ್ಕಿ, ಬೇಳೆ, ಬಾಳೆಯೆಲೆ, ತೆಂಗಿನಕಾಯಿ ಜಮಾಯಿಸಿಕೊಂಡು ಹೋದರು. ನಮ್ಮ ಸಾಹುಕಾರ್ರು ಎರಡು ಪಲ್ಲಾ ಅಕ್ಕೀ ಒಂದು ಜೊತೆ ಕಲಾಪತ್ತಿನ ಪಂಚೆ ಕೊಟ್ಟು ಕಳುಹಿಸಿದರು. ಅವರು ಬಡವರಿಗೆ ತುಂಬಾ ಸಹಾಯ ಮಾಡೋರು. ನೀವು ನಮ್ಮ ಸೇಟರನ್ನು ನೋಡಿದರೆ ಈಅರ್ಜಿಯೆಲ್ಲಾ ಸುಳ್ಳೆಂದು ಗೊತ್ತಾಗುತ್ತೆ!

ಗನೆಯುವ

ಆಗಲಿ ವಿಚಾರಿಸೋಣ.

ಈ ಕಟ್ಟಡಕ್ಕೆ ಈಗ ಎಷ್ಟು ಖರ್ಚಾಗಿದೆ.

ಕಾರಕ

ಈಗಾಗಲೇ ಅರವತ್ತು ಸಾವಿರ ರೂಪಾಯಿ ಖರ್ಚಾಗಿದೆ. ಇನ್ನೂ ಐವತ್ತುಸಾವಿರ ರೂಪಾಯಿ ಬೇಕು. ಇದು ಪೂರ್ತಿ ಆಗಬೇಕಾದರೆ. ಅವರಿಗೆ ಇದೇನೂ ದೊಡ್ಡದಲ್ಲ! ಬನ್ನಿ ಹೋಗೋಣ ಹೊತ್ತಾಗಿದೆ.

ಕಾರಕನು ಮುಂದೆ ಹೋಗುವನು ಅವನನ್ನು ಅನುಸರಿಸಿ ಪೋಲೀಸಿನವರು ನಡೆಯುತ್ತಾ ಮತ್ತನೆ ಸಂಭಾಷಣೆ ನಡೆವರು.

೧ನೆಯುವ

....ಸುಮ್ಮನೆ ಅವನ ಮಾತಿಗೆ ಮಂಕಾಗಬೇಡ.

೨ನೆಯುವನು

ನನಗೆ ಕಲಿಸುತೀಯಲ್ಲ! ಈ ವಯಸ್ಸಿಗೆ ಇಂತವಹರನ್ನು ಎಷ್ಟು ಜನಾ ನೋಡಿಲ್ಲ!

ಆಗಲೀ ಎರಡು ಕೆಲಸವೂ ಆಗಬಹುದಲ್ಲ!

ಇಲ್ಲಿ ನೋಡು ಇಲ್ಲಿ! ಬಲವಾಗಿದೆ.

ಕಾಗದವನ್ನು ತೋರಿತ್ತಾ ಮುಂದೆ ನಡೆಯುವನು.

(ತೆರೆ ಬೀಳುವುದು)

---

# ಅಂಕ ೧. ನೋಟ ೪.

ಕೂಲಿಯ ಗುಡಿಸಲು. ಹಿಂಭಾಗಕ್ಕೆ ಮತ್ತೊಂದು ಬಾಗಿಲು ಇರುವುದು. ಗೋಡೆಯ ಅಂಚಿನಲ್ಲಿ ಒಂದು ಚಾಪೆ. ಇದರ ಮೇಲೆ ಹರಕು ಕಂಬಳಿ ಹಾಸಿರುವುದು. ದೊಡ್ಡನು ತಲೆಗೆ ಬಟ್ಟೆಯನ್ನು ಕಟ್ಟಿಕೊಂಡು ಮಲಗಿರುವನು. ಮತ್ತೊಂದುಗೋಡೆಯ ಪಕ್ಕದಲ್ಲಿ ಕಾಳಯ್ಯನು ಕೈಮೇಲೆ ತಲೆಯಿಟ್ಟುಕೊಂಡು ಚಿಂತಿಸುತ್ತ ಕುಳಿತಿರುವನು. ದೇವಿಯು ಒಳಗಿನಿಂದ ಪ್ರವೇಶಿಸುವಳು.

ಕಾಳಯ್ಯ

ದೇವಿಯನ್ನು ಕುರಿತು

ದೊಡ್ಡನಿಗೆ ಈಗತಾನೇ ಕೊಂಚ ವೊಬ್ಬು ಹತ್ತಿದೆ. ಗಂಜಿಯಾಯಿತೇನವ್ವಾ!

ದೇವಿ!

ಇನ್ನೇನು ಆಯಿತಪ್ಪ! ನಿನಗೆ ಕೊಂಚ ಕೊಡತೀನಿ!

ಕಾಳಯ್ಯ

ಅಯ್ಯೋ ನನಗೆ ಬೇಡಾ ತಾಯಿ!

ದೊಡ್ಡ ರಾತ್ರಿಯೂ ಏನೂ ತಿನ್ನಲಿಲ್ಲ! ಪಾಪ! ಅವನಿಗೆ ಕೊಡು, ನೀನು ಕೊಂಚ ತೆಗೆದುಕೊ!

ತಾಯಿ! ನಾನು ಹೋಗಿ ಎಲ್ಲಾದರೂ ಕೇಳಿ ಕೊಂಚ ರಾಗೀ ಸಾಲ ತರುವೆನು.

ದೇವಿ!

ಅಪ್ಪಾ! ಇಂತಹ ಕಾಲದಲ್ಲಿ ಸಾಲ ಕೊಡುವರು ಯಾರು! ಎಲ್ಲರೂ ಕಷ್ಟಪಡುತ್ತಿರುವರು.

ಕಾಳಯ್ಯ

ಗೌಡರು ಅಥವ ಶಾನುಭೋಗರ ಮನೆಗೆ ಹೋಗಿ ಕೇಳಿಕೊಂಡು ಬರುವೆನು.

ದೇವಿ!

ಅಪ್ಪಾ ನಿನಗೆ ಹುಚ್ಚು! ಏನಾದರೂ ಆಶೆಯಿದ್ದರೆ ಇಲ್ಲವೇ ಬಲವಾದ್ದು ಅಡೂಮಡಗಿದರೆ ಕೊಡುತ್ತಾರೆ. ಅದಿಲ್ಲದಿದ್ದರೆ ನಮ್ಮಂತಹವರಿಗೆ ಅವರು ಸಾಲಾ ಕೊಡೋದು ದಿಟವೇ!

ಸುಮ್ಮನೇ ಕೇಳಿ ಮನಸ್ಸು ಚಿಕ್ಕದುಮಾಡಿಕೊಳ್ಳ ಬೇಕೇ!

ಕಾಳಯ್ಯ

ಹಾಗಾದರೆ ರಾತ್ರಿಗೆ ಏನುಮಾಡುವುದು. ನಾವೇನೋ ಉಪವಾಸ ಇರಬಹುದು! ದೊಡ್ಡ ಈಗತಾನೇ ಹಾಸಿಗೆ ಬಿಟ್ಟು ಏಳುತಾ ಇದಾನೆ. ಅವನನ್ನು ಉಪಾಸಬೀಳಿಸು ವುದು ಹೇಗೆ! ಪೂರೋಣ ಅಂದರೆ ನಮ್ಮಲ್ಲಿ ಹಿತ್ತಾಳೆ ತಾಮ್ರ ಕೂಡ ಇಲ್ಲವಲ್ಲ! ಏನು ಕಷ್ಟ ಕೊಟ್ಟ....!

ದೇವಿ

ಅಪ್ಪಾ! ಯೋಚಿಸಬೇಡ. ಇದು ತೊಗೊಂಡು ಹೋಗಿ ಕೊಟ್ಟು ಶಾನುಭೋಗರ ಮನೇಲಿ ಕೊಂಚ ರಾಗೀನಾರೂ ತಗೊಂಡು ಬಾ!

ಕಡಗವನ್ನು ತೆಗೆದು ಕೊಡುವಳು.

ಕಾಳಯ್ಯ

ಕಣ್ಣೀರು ಹಾಕುತಾ

ತಾಯಿ! ನಾನು ಬದುಕಿದ್ದೂ ನಿನ್ನ ಕೈಕಡಗಾ ತೆಗೆಸಬೇಕಾಯಿತೇ! ನಿಮ್ಮ ಅವ್ವ ಅದನ್ನು ಎಷ್ಟು ಪ್ರೀತಿಯಿಂದ ಮಾಡಿಸಿದ್ದಳು. ಅದನ್ನು ಅಡಾಮಡಗಿ ಹೊಟ್ಟೆಗೆ ತಿನ್ನೋದೇ!

ದೇವಿ

ಅಪ್ಪಾ! ದೇವರು ಕಷ್ಟಾ ಕೊಟ್ಟಾಗ ಅಳಬಾರದು. ಧೈರ್ಯವಾಗಿರಬೇಕು!

ಇದು ಹೀಗೆ ಇರೊಲ್ಲ. ಕತ್ಲೇ ಮುಗಿದ ಮೇಲೆ ಬೆಳಕು ಬಂದೇ ಬರುತ್ತೆ!

ಆ ದೊಡ್ಡಯ್ಯನ್ನ ನೋಡು. ಆ ಜೀವ ಬದುಕಿಕೊಂಡರೆ ಇಂತಹ ಕಡಗ ಎಷ್ಟು ಬೇಕಾದರು ಕೊಂಡುಕೊಳ್ಳಬಹುದು. ಹೋಗಿ ಬಾಪ್ಪ!

ಕಾಳಯ್ಯ

ಆಗಲಿ ತಾಯಿ! ನಾನು ಹೋಗಿಬರುತೇನೆ.

ನೀನು ಕೊಂಚ ದೊಡ್ಡಯ್ಯನನ್ನು ನೋಡಿಕೊ. ಅವನಿಗೆ ಗಂಜಿಯನ್ನು ಕೊಡು!

ಕಡಗವನ್ನು ಬಟ್ಟೆಯಲ್ಲಿ ಸುತ್ತಿಕೊಂಡು ಹೊರಡುವನು.

ದೇವಿಯು ಹಾಗೆಯೇ ನಿಂತು ಯೋಚಿಸುತ್ತಿದ್ದು ನಿಟ್ಟುಸಿರು ಬಿಟ್ಟು ಸೆರಗಿನಿಂದ ಕಣ್ಣು ವರಸಿಕೊಂಡು ಒಳಗೆ ಹೋಗುವಳು.

ದೊಡ್ಡ

ಅ ಆ ಆ—ಅಮ್ಮಾ ಆ ಆ - - -

ಹಾಸಿಗೆಯಲ್ಲಿ ಹೊರಳುವನು

ದೇವಿ

ಒಂದು ಮಡಕೆಯಲ್ಲಿ ಬಿಸಿಯಾದ ಗಂಜಿಯನ್ನು ತಂದಿಟ್ಟು ಮತ್ತೊಂದು ಸಣ್ಣಮಣ್ಣಿನ ಪಾತ್ರೆಗೆ ಹಾಕಿ ಆರಿಸುವಳು.

ಹೊರಳಾಡುತ್ತಿದ್ದ ದೊಡ್ಡಯ್ಯನು ಎದ್ದು ಕುಳಿತುಕೊಳ್ಳುವನು.

ದೊಡ್ಡಯ್ಯ ತೆಗೆದುಕೊ! ಬಿಸಿಯಾಗಿರುವಾಗಲೇ ಕೊಂಚ ಕುಡಿ! ರಾತ್ರಿಯಿಂದ ಹೊಟ್ಟೆಗೆ ಏನೂ ಇಲ್ಲ.

ದೊಡ್ಡಯ್ಯ

ಎಡಗೈಯ್ಯಲ್ಲಿ ತಲೆಯನ್ನು ಅದುಮಿಕೊಳ್ಳುತಾ

ದೇವಿ! ಈ ದಿನ ನಿನ್ನೆಯಷ್ಟು ಯಾತನೆಯಿಲ್ಲ! ನಿನ್ನ ಉಪಚಾರದಿಂದ ಬಹುಬೇಗ ಗುಣವಾಯಿತು!

ಮಾವ ಎಲ್ಲಿ ಹೋದ, ಕಾಣೋಲ್ಲ!

ದೇವಿ

ಅಪ್ಪ ಈಗತಾನೇ ಊರಕಡೆ ಹೋದ!

ದೊಡ್ಡಯ್ಯ

ಅಯ್ಯೋ ನನ್ನಿಂದ ನಿಮ್ಮೆಲ್ಲರಿಗೂ ಎಷ್ಟೊಂದು ಕಷ್ಟ!

ಈ ಕಷ್ಟದಲ್ಲೂ ನನ್ನ ಆರೈಕೆ! ಹಗಲು ರಾತ್ರಿ ನಿದ್ದೆಯಿಲ್ಲದೇ ಉಪಚಾರ! ದೇವೀ, ನಿನ್ನ ಈ ಉಪಚಾರ ವನ್ನು ಸಾಯುವವರಿಗೂ ಮರೆಯುವಹಾಗಿಲ್ಲ.

ದೇವಿ

ಯಾವಕಾಲಕ್ಕೇನು ಬರುತ್ತೋ ಯಾರು ಬಲ್ಲರು!

ಬಡವರಿಗೆ ಬಡವರೇ ಆಗಬೇಕು! ಇಷ್ಟಕ್ಕೂ ನಾವು ಮಾಡಿದ್ದೇನು! ಅಂಬಲಿಯೋ ಗಂಜಿಯೋ ದೇವರು ಕೊಟ್ಟಿದ್ದು ನಿನಗೂ ಕೊಡುತೇವೆ.

ಪಾತ್ರೆಯನ್ನು ತೆಗೆದು ಕೊಡುವಳು.

ದೊಡ್ಡಯ್ಯ

ನಿನ್ನ ಕೈ ಗಂಜಿಯು ನನಗೆ ಅಮೃತ.

ದೊಡ್ಡಯ್ಯನು ಅದನ್ನು ಕೈಗೆದುಕೊಂಡು ಕುಡಿದು ಮತ್ತೆ ಪಾತ್ರೆಯನ್ನು ದೇವಿಯ ಕೈಲಿ ಕೊಟ್ಟು; ಆಶ್ಚರ್ಯಪಟ್ಟು ಅವಳ ಕೈ ಹಿಡಿದುಕೊಂಡು

ದೇವಿ, ದೇವಿ! ಇದೇನು!

ನಿನ್ನ ಕೈ ಕಡಗವೇನಾಯಿತು!

ದೇವಿ!

ಕೈ ಹಿಂದಕ್ಕೆ ಸರಿಸಿಕೊಂಡು ಮರೆಮಾಡಿಕೊಳ್ಳಲೆತ್ನಿಸುತ್ತಾ

ಒಳಗೆ ತೆಗೆದಿಟ್ಟಿರುವೆನು! ಅದಕ್ಕೆ ಒಪ್ಪಹಾಕಿಸಿ ಇಟ್ಟು ಕೊಳ್ಳುವೆನು.

ದೊಡ್ಡ

ಅವಳ ಕೈ ಹಿಡಿದು ಕೆನ್ನೆಗೆ ಒತ್ತಿಕೊಂಡು

ದೇವಿ ನನ್ನಲ್ಲಿ ಮರೆಮಾಚುವೆಯಾ !

ಅದನ್ನು ನೀವು ಮಾರಿರಬಹುದು !

ನನಗಾಗಿ ನೀವು ಇನ್ನೆಷ್ಟು ಬಗೆಯ ಕಷ್ಟಕ್ಕೆ ಸಿಕ್ಕಬೇಕಾಗಿದೆಯೋ ಕಾಣೆ !

ದೇವಿ

ನೀನು ಹಾಗೆಲ್ಲಾ ಯೋಚಿಸಬಾರದು. ಎಲ್ಲವೂ ಮುಂದೆ ಸರಿಯಾಗುವುದು.

ದೊಡ್ಡ

ದೇವಿ ! ನೀನೇ ನನ್ನ ದೇವಿ !

ನಿನ್ನಿಂದ ನಾನು ಜೀವದೊಂದಿಗೆ ಉಳಿದುಕೊಂಡಿರುವೆನು.

ಬಂಜರುಭೂಮಿಯಂತಿದ್ದ ನನ್ನಮನದೊಳಗೆ ನಾನಾ ಬಗೆಯ ಹೊಸಹೊಸ ಆಶೆಗಳು ಮೂಡುತ್ತಿವೆ.

ಎಂತಹ ಸಂಕಟದಲ್ಲಿಯಾದರೂ ನಿನ್ನ ಅರಳಿದ ಮುಖಕಮಲವನ್ನು ನೋಡಿದರೆ ನನ್ನ ದುಃಖವೆಲ್ಲವೂ ಮರೆತುಹೋಗುವುದು. ಇಂತಹ ಆರೈಕೆದೊರೆತ ನಾನೇ ಪುಣ್ಯವಂತ !

ನಿನ್ನ ಉಪಕಾರಕ್ಕೆ ಪ್ರತ್ಯುಪಕಾರ ಮಾಡಬಲ್ಲೆನೇ ನಾನು ?

ದೇವಿ

ನಿನ್ನ ಮಾತುಗಳು ನನ್ನನ್ನು ನೈಪುರೆಸುತ್ತಿವೆ.

ನಾನು ಮಾಡಿರುವುದೇನು ಅತಿಶಯ! ನೀನಾದರೂ ಪ್ರಾಣದಮೇಲಿನ ಆಶೆಯನ್ನು ತೊರೆದು ನನ್ನ ಮಾನವನ್ನು ಕಾಪಾಡಿದೆ. ಕೆಲಸಮಾಡುವವರಿಗೆ ಕೂಲಿಗೆ ಕಡಮೆಯೇ ! ಇಲ್ಲಲ್ಲದಿದ್ದರೆ ಮತ್ತೆಲ್ಲಾದರೂ ಸಿಕ್ಕುವುದು.

ನಮ್ಮ ಕೂಲಿಗಾರರೆಲ್ಲರೂ ಹೊಟ್ಟೆಗಿಲ್ಲದೆ ಕಷ್ಟಪಡುತ್ತಿದ್ದರೂ ಒಗ್ಗಟ್ಟಿನಿಂದ ಆ ಪಾಪಿಗಳನ್ನು ಎದುರಿಸುತ್ತಿರುವರು.

ನಮ್ಮನ್ನು ದನಗಳಿಗಿಂತ ಕಡೆಯಾಗಿ ಕಾಣುತ್ತಿದ್ದ ಆ ಘಾತುಕರೇ ಇಂದು ನಮ್ಮೊಡನೆ ರಾಜೀ ಮಾಡಿಕೊಳ್ಳಲು ಓಡಾಡುತ್ತಿರುವರು.

ಇವಕ್ಕೆ ಮೊದಲು ನಮ್ಮನ್ನು ಕೇಳುತಿದ್ದವರಾರು ?

ದೊಡ್ಡ

ಇದ್ದರೂ ಇರಬಹುದು, ಆದೆಲ್ಲಾ ಒಗ್ಗಟ್ಟಿನ ಮಹಿಮೆ.

ಆದರೆ ಈ ಕಷ್ಟವನ್ನು ನೋಡುವುದು ಅಸಾಧ್ಯವಾಗಿದೆ. ಮುಂದೆ ಏನೂ ತೋಚುವುದಿಲ್ಲ.

ದೇವಿ, ನಿಮ್ಮ ಸಂಸಾರದ ವಿಷಯವನ್ನೆಲ್ಲಾ ಕೇಳಿರುವೆನು—ನೀನು ದೊಡ್ಡ ಮನೆತನಕ್ಕೆ ಸೇರಿ ಸುಖದಲ್ಲಿ ಬೆಳೆದವಳು ! ಕಷ್ಟಪಟ್ಟು ಅನುಭವವಿಲ್ಲ. ಇದನ್ನೆಲ್ಲ ಹೇಗೆ ಸಹಿಸುತ್ತಿರುವೆಯೋ ಕಾಣೆ.

ನಿನ್ನ ರೂಪುನೋಡಿ ಯಾರಾದರೂ ಪುಣ್ಯವಂತರು ಮದುವೆ ಮಾಡಿಕೊಂಡಾರು. ಆಗ ನೀನುಸುಖವಾಗಿ ಇರಬಹುದು.

ದೇವಿ.

ದುಡ್ಡಿನಿಂದಲೇ ದೊಡ್ಡವರಾದವರ ಸಂಬಂಧ ನನಗೆ ಬೇಕಿಲ್ಲ. ಹಣಕ್ಕಿಂತಲೂ ಗುಣಕ್ಕೆ ಗೌರವವುಂಟು ! ಅದು ಹಾಗಿರಲಿ.

ಮನ ಮೆಚ್ಚಿದುದಕ್ಕಾಗಿ ಕಷ್ಟಪಡುವವರಲ್ಲೇ ಸುಖವುಂಟು, ಸಂತೋಷವುಂಟು.

ನೀನೊಬ್ಬ ಸುಖವಾಗಿ ಮೇಲಕ್ಕೆದ್ದರೆ ನೂರಾರು ಜನರು ಸುಖವಾಗಿರಬಹುದು.

ದೊಡ್ಡಯ್ಯ.

ಇದು ನಿನ್ನ ಮೆಚ್ಚಿಗೆಯ ಮಾತು!

ದೇವಿ—ಕಷ್ಟಕೂ ಒಂದು ಮಿತಿಯುಂಟು. ಅದು ಮಿತಿಮೀರಿದರೆ ಸಹಿಸುವುದು ಅಸಾಧ್ಯ! ಆದರೆ ಈ ಕಷ್ಟದಿಂದ ಪಾರಾಗಲು ನಿನಗೆ ಬೇಕಾದಷ್ಟು ಅವಕಾಶಗಳಿವೆ

ಧನಿಕನಾದ ದಾಮೋದರ ಸೇಟಿ ನಿನ್ನನ್ನು…………

ದೇವಿ.

ಅತೃಪ್ತಿ ಮತ್ತು ಅಸಹನೆಯಿಂದ ಮುಖತಿರುಗಿಸಿಕೊಂಡು

ಆ ಚಂಡಾಲನ ಮಾತೆತ್ತಬೇಡ! ಹೊಟ್ಟೆಗಿಲ್ಲದೆ ಭಿಕ್ಷ ಬೇಡಿದರೂ ಚಿಂತೆಯಿಲ್ಲ! ಅವನ ಇಷ್ಟದಂತೆ ಇರಲಾರೆ. ಹಾಗಿರಲು ನಾನೇನು ಕಾಡುಮೃಗವೆ? ನಿನಗೇಕೆ ಈ ಪಾಳು ಯೋಚನೆ ಹೊಳೆಯಿತು!

ನಾನು ಯಾರನ್ನು ಮದುವೆ ಮಾಡಿಕೊಳ್ಳಬೇಕೆಂದು ಆಗಲೇ ನಿರ್ಧರಿಸಿದ್ದೇನೆ!

ದೊಡ್ಡ.

ಯಾರನ್ನು ಮಾಡಿಕೊಳ್ಳುವೆ! ದೇವಿ ಹೇಳು! ಯಾರನ್ನು ಮಾಡಿಕೊಳ್ಳುವೆ!

ದೇವಿ.

ನಿನಗದು ಗೊತ್ತೇ ಇದೆ. ನಾನೇಕೆ ಬಾಯಿಬಿಟ್ಟು ಹೇಳಬೇಕು.

ದೊಡ್ಡ.

ಹೇಳುವುದರಲ್ಲಿ ತಪ್ಪೇನು? ನನ್ನ ಮನಸ್ಸಿಗಷ್ಟು ಸಮಾಧಾನವಾಗುವುದು! ಹೇಳು.

ದಾಮೋದರ ಸೇಟಿನ ಜವಾನನು ಪ್ರವೇಶಿಸುವನು; ದೇವಿಯು ಹಿಂದೆ ಸರಿಯುವಳು.

ಜವಾನ

ವಣಿಗಳು ದಯಮಾಡಿಸಿರುವರು. ದೊಡ್ಡಾ ನಿನ್ನನ್ನು ನೋಡುವುವಕ್ಕೇ ಬಂದಿರುವರು. ಬೇಗ ಬಾ! ಬಾ ಕಾದಿರುವರು.!

ದೊಡ್ಡ

ಏನು! ನನ್ನನ್ನು ನೋಡಲು ಬಂದಿರುವರೇ! ಆಗಬಹುದು! ಒಳಗೆ ಬರಲು ಅಡ್ಡಿಯಿಲ್ಲ. ಕರೆದು ಕೊಂಡು ಬಾ!

ಜವಾನ

ತಪ್ಪಿಲ್ಲ ತಾನೆ ಕರೆದುಕೊಂಡು ಬಾ!

ಇವನ ಜಂಭವಿಷ್ಟರಬೇಕು! ಸೇಟರ ಯೋಗ್ಯತೆ ಯೇನು, ಇವನ ಯೋಗ್ಯತೆಯೇನು. ಆಗಲಿ, ಇದಕ್ಕೆ ಪ್ರಾಯಶ್ಚಿತ್ತ ಮಾಡಿಸುವೆನು.

ಹೊರಗೆ ಹೋಗುವನು. ದೇವಿಯು ಚಾಪೆಯನ್ನು ಹಾಕಿ ಒಳಗೆ ಹೋಗುವಳು. ಸ್ವಲ್ಪ ಹೊತ್ತಿನಲ್ಲೇ ಸೇಟು ಒಳಗೆ ಪ್ರವೇಶಿಸುವನು.

ದೊಡ್ಡ

ಬನ್ನಿ! ಕುಳಿತುಕೊಳ್ಳಿ!

ಚಾಪೆಯನ್ನು ತೋರಿಸುವನು. ಸೇಟು ಒಂದು ಕ[illegible]ಕೊಂಡು

ಸೇಟು

ಏನು ದೊಡ್ಡಯ್ಯ ಹೇಗಿದೆ! ಪಾಪ! ತುಂಬಾ ಏಟು ಬಿತ್ತಂತೆ!

ಈಗ ಹೇಗಿದೆ. ವಾಸಿಯಾಯಿತೇ!

ದೊಡ್ಡ

ಇನ್ನೂ ಸತ್ತಿಲ್ಲ; ನೀವು ಬಂದದ್ದೇನು?

ಏನೂ ಇಲ್ಲ. ನಿನ್ನನ್ನು ನೋಡಿಕೊಂಡು ಹೋಗಲು .ಬಂದೆ.

ಸೇಟು

ಆ ಕಾರಕ ಮಾಡುವುದೆಲ್ಲಾ ಹೀಗೇ! ಅವನನ್ನು ಕೆಲಸದಿಂದ ವಜಾ ಮಾಡಬೇಕೆಂದಿದೇನೆ.

ನೀನು ಸರಿಯಾಗಿದ್ದರೆ ಆ ಕೆಲಸವನ್ನು ನಿನಗೆ ಕೊಟ್ಟು ನಿನ್ನವರಿಗೆಲ್ಲಾ ಅನುಕೂಲ ಮಾಡಿಕೊಡುವೆನು.

ದೊಡ್ಡ

ಹಾಗೋ! ಹಾಗಾದರೆ ಅವನನ್ನು ಕೆಲಸದಿಂದ ತೆಗೆಯಲು ಅಡ್ಡಿಯೇನು?

ಸೇಟು

ಮೊದಲು ನಿಮ್ಮವರೆಲ್ಲ ಕೆಲಸಕ್ಕೆ ಬರಬೇಕು. ಆಮೇಲೆ ಸರಿಯಾಗಿ ವಿಚಾರಣೆನಡೆಸಿ ಅವನನ್ನು ವಜಾ ಮಾಡುವೆನು!

ದೊಡ್ಡ

ಸರಿ! ಹಾಗಾದರೆ ಸಾಧ್ಯವಿಲ್ಲ. ಕಾರಕನು ಅಲ್ಲಿರುವವರಿಗೆ ನಾವು ಕೆಲಸಕ್ಕೆ ಬರುವುದಿಲ್ಲ!

ಸೇಟು

ಏನು! ಕೆಲಸಕ್ಕೆ ಬರುವುದಿಲ್ಲವೇ! ನೀನು ಬರದಿದ್ದರೆ ಕೆಲಸ ಉಳಿಯುವುದಿಲ್ಲ! ನಿಮ್ಮೆಲ್ಲರನ್ನು ಒಟ್ಟಿಗೆ ವಜಾ ಮಾಡಿ ಹೊಸಬರನ್ನು ತರಬಲ್ಲೆ! ಹೊಟ್ಟೆಗೆ ಒಟ್ಟು ಹಾಕಿದರೆ ಸಾಕು; ಹಗಲಿಂದ ರಾತ್ರಿಯವರಿಗೆ ದುಡಿಯುವವರಿದ್ದಾರೆ.

ಏನೋ ಬಹುದಿನದಿಂದ ಕೆಲಸ ಮಾಡಿದವರು. ಹೇಳಿಕೆಯ ಮಾತು ಕೇಳಿ ಈ ಸಾರಿ ತಪ್ಪು ಮಾಡಿದ್ದರು ಮುಂದೆ ತಿದ್ದಿಕೊಳ್ಳಬಹುದು; ಎಂದುಕೊಂಡು ನಿನಗೆ ಇಷ್ಟು ಹೇಳಿದೆನು. ಈಗಾಗಲೇ ನಿಮ್ಮಲ್ಲಿ ಅನೇಕರು ಕೆಲಸಕ್ಕೆ ಬರುವೆವೆಂದು ಬೇಡಿಕೊಳ್ಳುತ್ತಿರುವರು. ಈಗಲೂ

ಚನ್ನಾಗಿ ಯೋಚಿಸಿ, ಜನರಿಗೆ ಸರಿಯಾಗಿ ಬುದ್ಧಿ ಹೇಳು. ದುಡುಕಿದರೆ ನೀನು ಕೆಡುವುದಲ್ಲದೆ ಇತರರನ್ನೂ ಕೆಡಿಸುವೆ! ಎಚ್ಚರಿಕೆ! ಕಾರ್ಯ ಕೈಮಿಂಚಿದ ಮೇಲೆ ಪಶ್ಚಾತ್ತಾಪಪಟ್ಟು ಫಲವಿಲ್ಲ.

ದೊಡ್ಡ

ನಾವು ಈ ಗೊಡ್ಡು ಬೆದರಿಕೆಗೆ ಹೆದರುವವರಲ್ಲ. ಹೊಸಬರನ್ನೇ ತೆಗೆದುಕೊಂಡು ನಿಮ್ಮ ಕೆಲಸ ಮಾಡಿಸಿಕೊಳ್ಳಿ. ಕಾರಕನನ್ನು ಕೆಲಸದಿಂದ ತೆಗೆದು ಕೂಲಿಕಾರರು ಕೇಳುವ ಅನುಕೂಲಗಳನ್ನು ಮಾಡಿಕೊಟ್ಟಲ್ಲದೆ ನಾವು ಕೆಲಸಕ್ಕೆ ಬರುವುದಿಲ್ಲ.

ಹೊಟ್ಟೆಗಿಲ್ಲದೆ ಸತ್ತರೂ ಚಿಂತೆಯಿಲ್ಲ. ನಮ್ಮ ನಿಶ್ಚಯದಿಂದ ಹಿಮ್ಮೆಟ್ಟುವುದಿಲ್ಲ. ಬಂದುದನ್ನೆಲ್ಲಾ ಅನುಭವಿಸಲು ಸಿದ್ಧರಾಗಿರುವೆವು!

ಸೇಟು

ಹು ಹೂ! ಅನುಕೂಲಗಳು! ಒಪ್ಪತ್ತಿನ ಊಟಕ್ಕಿಲ್ಲದೆ ಸಾಯುತ್ತಿದ್ದವರನ್ನು ಕರೆದು ಕೈತುಂಬ ಸಂಬಳ ಕೊಡುವುದು ಸಾಲದು; ಇನ್ನು ಬೇರೆ ಅನುಕೂಲಗಳು! ಆಗಲಿ! ನಿಮಗಾಗಬೇಕಾದ ಅನುಕೂಲಗಳೇನು ಹೇಳು.

ದೊಡ್ಡ

ನಾವು ಕೇಳುವ ಅನುಕೂಲಗಳಾವುವೂ ಅಸಾಧ್ಯವಾದುವಲ್ಲ :—

ಕೆಲಸಮಾಡುವುದಕ್ಕೆ ಕಾಲನಿಯಮವಿರಬೇಕು. ಮೇಸ್ತ್ರಿಯು ಮನಬಂದಾಗ ಬಿಡುವುದು ಬಾರದಾಗ ಕೂಗುವುದು ; ಹೀಗಿರಬಾರದು.

ವಾರದಲ್ಲಿ ಒಂದುದಿನವಾದರೂ ವಿರಾಮವೀಯಬೇಕು.

ಕುಂಟುನೆಪಹೇಳಿ ಕೂಲಿಯಲ್ಲಿ ಹಿಡಿಯುವುದು, ಗೈರುಹಾಜರು ಹಾಕುವುದು, ಸರಿಯಾದ ಕಾರಣವಿಲ್ಲದೆ ಕೆಲಸಗಾರರನ್ನು ಕೆಲಸದಿಂದ ಬಿಡಿಸುವುದು, ಇಂತಹ ಅನ್ಯಾಯಗಳೆಲ್ಲ ನಿಲ್ಲಬೇಕು.

ಸೇಟು

ಇಷ್ಟೇ ಸಾಕೋ, ಸಾಲದೊ!

ದೊಡ್ಡ

ಸಾಲದು! ಕೂಲಿಗಾರರನ್ನು ಗೌರವವಾಗಿ ಮಾತ ನಾಡಿಸಬೇಕಲ್ಲದೆ; ಹೊಡೆಯುವುದು, ಬಯ್ಯುವುದು ಇವು ಪೂರ್ತಿಯಾಗಿ ನಿಲ್ಲಬೇಕು. ಹೆಂಗಸರ ಮಾನ ರಕ್ಷಣೆಯ ಭರವಸೆಯನ್ನೀಯಬೇಕು!

ಕೆಲಸಮಾಡುವವರಿಗೆ ವಾಸಿಸಲು ಸರಿಯಾದ ಸ್ಥಳ ಗಳನ್ನೇರ್ಪಡಿಸಿ ಸ್ನಾನ ಸೌಕರ್ಯವನ್ನೇರ್ಪಡಿಸಿ ಕೊಡಬೇಕು. ಮುಖ್ಯ ಕೆಲಸಗಾರರನ್ನು ಮನುಷ್ಯ ಮಾತ್ರದವರೆಂದು ತಿಳಿಯಬೇಕು.

ಸೇಟು

ನಿನ್ನ ಪುರಾಣ ಮುಗಿಯಿತೋ, ಇನ್ನೂ ಏನಾ ದರೂ ಉಂಟೊ.

ದೊಡ್ಡ

ಮತ್ತೊಂದು ಮುಖ್ಯ ವಿಷಯವುಂಟು :—

ಪ್ರತಿ ವರುಷವೂ ಈ ಕೆಲಸದಿಂದ ಬಂದ ನಫೆಯಲ್ಲಿ ಒಂದು ಗೊತ್ತಾದ ಭಾಗವನ್ನು ಕೆಲಸಗಾರರಿಗೆಲ್ಲ ಹಂಚ ಬೇಕು! ಅಷ್ಟೇ!

ಹು ಹೂ! ಹಣಸುರಿದವರು ಹಾಳಾಗಿಹೋಗಲಿ; ನೀವು ಮಾತ್ರ ಬದುಕಬೇಕು! ಕೂಲಿಯಜೊತೆಗೆ ನಫೆ ಯನ್ನೂ ಹಂಚಿಕೊಡಬೇಕು! ಆಗಬಹುದು.

ತಿಳಿಯಿತು! ಈ ಚಿತ್ರಾಪಹಾರಕರು ಯಾರೆಂದು ಈಗ ತಿಳಿಯಿತು! ಒಳ್ಳೆಯದು. ನಾನು ನಿನ್ನ ಸೊಕ್ಕನ್ನಿಳಿಸುವೆನು.

ದೊಡ್ಡ

ನಿನ್ನಿಂದ ಸಾಧ್ಯವಾದುದನ್ನೆಲ್ಲ ಮಾಡಬಹುದು. ನಾವು ಎಲ್ಲಕ್ಕೂ ತಯಾರಿರುವೆವು.

ಸೇಟು

ಛೀ ದೊಡ್ಡ! ಬಾಯಿಮುಚ್ಚು. ಜೀತದ ಕೂಲಿಗೆ ಇಷ್ಟು ದುರಹಂಕಾರವೇ! ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೀಗಲೇ ಅನುಭವಿಸುವೆ!

ಆ ಸ್ಥಳವನ್ನು ಬಿಟ್ಟು ದೇವಿಯು ಬಗ್ಗಿ ನೋಡುತ್ತಿದ್ದ ಬಾಗಿಲಬಳಿಗೆ ಬಂದು

ಛೀ! ದೇವಿ! ಬಾ ಇಲ್ಲಿ! ಈ ಪುಂಡನನ್ನು ಮನೆಯಿಂದ ಬಿಟ್ಟೋಡಿಸಬೇಕೆಂದು ಹೇಳಿಕಳುಹಿಸಿರಲಿಲ್ಲವೇ! ನೀವು ಇವನನ್ನು ಸೇರಿಸಿಕೊಂಡು ದೊಂಬಿಯೆಬ್ಬಿಸಬೇಕೆಂದಿರುವಿರಾ!

ಈ ಕ್ಷಣದಲ್ಲಿ ಇವನನ್ನು ಮನೆಬಿಟ್ಟೋಡಿಸಬೇಕು. ಇಲ್ಲದಿದ್ದರೆ ನೀವೂ ಕಷ್ಟಕ್ಕೆ ಸಿಕ್ಕುವಿರಿ! ಎಚ್ಚರಿಕೆ.

ದೇವಿಯು ಗಾಬರಿಯಿಂದ ದೊಡ್ಡನಹತ್ತಿರ ಹೋಗಿ ನಿಲ್ಲುವಳು. ದೊಡ್ಡನು ದಿಟ್ಟತನದಿಂದ ಮುಂದೆಬಂದು ನಿಂತುಕೊಳ್ಳುವಳು.

ದೊಡ್ಡ

ಛೀ! ಪಾಪಿ! ಗಂಡಸರಲ್ಲಿ ನಿನ್ನ ಪ್ರತಾಪ ನಡೆಯಲಾರದೆಂದು ಹೆಂಗಸರನ್ನು ಬೆದರಿಸುವೆಯಾ! ನಿನ್ನ ಪುಂಡಾಟವನ್ನು ನಾನು ಬಲ್ಲೆ!

ನಿನ್ನ ಜೀವದಮೇಲಿನ ಆಶೆಯನ್ನು ಬಿಟ್ಟು ದೇವಿಯ ಹತ್ತಿರಕ್ಕೆ ಬರಬಹುದು! ಅವಳೀಗ ನನ್ನ ರಕ್ಷಣೆಯಲ್ಲಿರುವಳು!

ಸೇಟು !

ಹಾಗೋ ! ಹಾಗಾದರೆ ನೋಡುವೆ !

ಚಪ್ಪಾಳೆ ತಟ್ಟುವನು. ಕಾರಕನೂ ಇಬ್ಬರು ಪೋಲೀಸಿನವರೂ ಒಳಗೆ ಪ್ರವೇಶಿಸುವರು.

ಕಾರಕ

ಅವಳನ್ನು ಎಳೆದುಕೊಂಡು ಬಾ ! ಅವನು ಹೇಗೆ ಬಿಡಿಸಿಕೊಳ್ಳುವನೋ ನೋಡೋಣ !

ಕಾರಕನು ಮುಂದರಿಯುವನು. ಅವನನ್ನು ಸುಸರಿಸಿ ಸೇಟು ಬಂದು ದೇವಿಯ ಕೈ ಹಿಡಿಯಲೆತ್ನಿಸುವನು.

ದೊಡ್ಡ

ಛೀ ಪಾಪಿ! ಮತ್ತೆ ನನ್ನ ಕೈಗೆ ಸಿಕ್ಕಿದೆಯಾ! ಹಾಗಾದರೆ ನನ್ನ ಶಕ್ತಿಯನ್ನಾದರೂ ನೋಡು.

ಕಾರಕನಿಗೆ ಬಲವಾಗಿ ಹೊಡೆದು, ಸೇಟನ್ನು ಕೆಳಗೆ ಬೀಳುವಂತೆ ತಳ್ಳುವನು. ಇಬ್ಬರೂ ದೂರವಾಗುವರು. ಸೇಟು ಚೇತರಿಸಿಕೊಂಡೆದ್ದು ಪೋಲೀಸಿನವರನ್ನು ಕುರಿತು

ಸೇಟು

ಏನು ನೋಡುತ್ತಿರುವಿರಿ. ನಿಮಗೆ ಮೊದಲೇ ಹೇಳಿರಲಿಲ್ಲವೆ. ಇವನೇ ಇಷ್ಟಕ್ಕೆಲ್ಲ ಕಾರಣನು. ಹಿಡಿಯಿರಿ ಈ ಕೂಡಲೇ ಇವನನ್ನು ಅರೆಸ್ಟುಮಾಡಿ ! ಮುಂದೇನು ಬಂದರೂ ನಾನು ನೋಡಿಕೊಳ್ಳುವೆನು.

ಕಾರಕನನ್ನು ಕುರಿತು

ನೀನೊಬ್ಬ ಮುಠ್ಠಾಳ! ದೇವಿಯನ್ನು ಎಳೆದುಕೊಂಡು ಬಾ ! ಹೋಗು !

ದೊಡ್ಡನು ಕೇಳದ ಸಂಪದಂತೆ ಮೋಳಿ ಬೀಳುವನು. ಪೋಲೀಸಿನವರು ಬಂದು ದೊಡ್ಡನ ಕೈ ಹಿಡಿದು ಎಳೆಯುವರು, ದೇವಿಯು ಭಯದಿಂದ ಅಳುವಳು. ಕಾರಕನು ಬಂದು ದೇವಿಯನ್ನು ದೊಡ್ಡನ ಹಿಡಿತದಿಂದ ಕಿತ್ತುಕೊಳ್ಳಲು ಯತ್ನಿಸುವನು. ದೊಡ್ಡನು ಹೆಚ್ಚಾಗಿ ಯತ್ನವಿಲ್ಲದೇ ದೇವಿಯನ್ನು ಬಿಟ್ಟು ಕೊಡುತ್ತಾ !

ದೊಡ್ಡ

ದೇವೀ! ದೇವಿ! ಇನ್ನು ನಾನು ಬದುಕಿದೂ ವ್ಯರ್ಥ.

ಈ ಪಾಪಿಗಳಿಗೆ ನೀತಿಯಿಲ್ಲ; ನಡತೆಯಿಲ್ಲ. ಇವರು ಧರ್ಮಕ್ಕೆ ಅಂಜುವವರಲ್ಲ. ನನ್ನ ಕಣ್ಣೆದುರಿಗೇ ನಿನ್ನನ್ನು ಎಳೆದೊಯ್ಯುತ್ತಿರುವರು.

ದೇವಿ

ಅಯ್ಯೋ! ಅಯ್ಯೋ! ಅಪ್ಪಾ! ಯಾರೂ ಇಲ್ಲವೇ! ಈ ಪಾಪಿಗಳಿಂದ ಬಿಡಿಸುವವರು ಯಾರೂ ಇಲ್ಲವೇ

ಮೂರ್ಛೆ ಬೀಳುವಳು. ಕಾರಕನು ಆಕೆಯನ್ನು ಎಳೆದುಕೊಂಡು ಹೋಗುವನು.

ಪೋಲೀಸಿನವರು

ಈರೀತಿ ಕೂಸರಾಡುವುದರಿಂದ ಪ್ರಯೋಜನವಿಲ್ಲ. ನಿನ್ನನ್ನು ಅರೆಸ್ಟು ಮಾಡಿರುವೆವು, ಹೊರಡು. ಇನ್ನು ಇಲ್ಲಿರುವುದಕ್ಕಾಗುವುದಿಲ್ಲ.

ಕೈಗೆ ಬೇಡಿಯನ್ನು ಹಾಕಿ ತಳ್ಳಿಕೊಂಡು ಹೋಗುವರು.

ದೊಡ್ಡ

ಹ-ಹ-ಹಾ! ಅರೆಸ್ಟು. ಬೇಡಿ! ಹ-ಹ-ಹಾ! ನನಗೆ ಬೇಡಿ! ಹ-ಹ-ಹಾ

ದೇವಿ! ದೇವಿ! ಅಯ್ಯೋ ನಿನ್ನನ್ನು—

ಏನು! ನಿನ್ನನ್ನು ಮುಟ್ಟಿದರೆ! ಎಳೆದರೇ! ಅವರಿಗೆ ಇನ್ನು ವಿನಾಶಕಾಲ.

ದೇವಿ, ಬಂದೆ. ಹೆದರಬೇಡ. ಆ ಆ ಆ ಪಾಪಿಯನ್ನು ಮುಗಿಸಿಬಿಡುವೆನು.

ಕೈ ನೋಡಿಕೊಂಡು ಅ-ಹ-ಹಾ... ಬೇಡಿ. ಸೆರೆಮನೆ ಹ-ಹ-ಹಾ

ತೆರೆ ಬೀಳುವುದು

---

## ಅಂಕ ೨ ನೋಟ ೧

ಹಳೆಯ ಮುರಿದ ಮನೆಯ ಗೋಡೆಯ ಪಕ್ಕ.

ಕೂಲಿ ಕೆಲಸಗಾರರು ಮೂರು ನಾಲ್ಕು ಜನರು ಪ್ರವೇಶಿಸುವರು.

೧ನೆಯ ಕೂಲಿ

ಏನನ್ಯಾಯ. ಪಾಪ ದೊಡ್ಡನನ್ನು ಹೊಡೆದು ಅವನ್ನೇ ಸೆರೆಮನೆಗೆ ಕೊಡೋದೆ! ಒಳ್ಳೇ ನ್ಯಾಯ. ಕೊನೆಗೆ ಅವನ್ನ ಏನಮಾಡಿದರು ?

೨ನೆಯ ಕೂಲಿ

ಏನುಮಾಡತಾರೆ ; ಹಿಡಕೊಂಡು ಹೋದರು ಮೂರುನಾಕು ದಿನ ಲಾಕುಪ್ಪಿನಲ್ಲಿಟ್ಟಿದ್ದರು. ಸರಿ ಕೆಲಸ ಆಯಿತು! ಆಮೇಲೆ ಹುಚ್ಚ ಅಂದರು, ಬಿಟ್ಟುಬಿಟ್ಟರು!

೧ ನೆಯವನು

ಅವನಿಗೆ ದಿಟವಾಗಲೂ ಹುಚ್ಚು ಹಿಡಿದಿದೆಯೋ ? ಎಷ್ಟು ಚನ್ನಾಗಿದ್ದ ! ನಮ್ಮ ಜೊತೆಲೆಲ್ಲಾ ಸರಿಯಾಗಿ ಮಾತಾಡುತಿದ್ದ. ಹುಚ್ಚು ಯಾವಾಗ ಹಿಡೀತು ಅವನಿಗೆ.!

೨ನೆಯ ಕೂಲಿ

ಅದು ಹುಚ್ಚು ಅನ್ನೋಕಾಗೊಲ್ಲ! ಬುದ್ಧಿ ಭ್ರಮಣೆ ಅನ್ನಬೇಕು. ಪಾಪ! ಅವನು ಆ ಹುಡುಗಿ-ದೇವೀನ ಮದುವೆಮಾಡಕೋಬೇಕು ಎಂದಿದ್ದ. ಆ ಸೇಟು ಹುಡುಗೀ ಚನ್ನಾಗಿದಾಳೆ ಅಂತ ಕಿತ್ತಕೊಂಡು ತನ್ನ ಮನೆಗೆ ಸೇರಿಸಿಕೊಂಡುಬಿಟ್ಟ. ಕೊನೆಗೆ ದೊಡ್ಡನನ್ನೇ ಪೋಲೀಸಿಗೆ ಕೊಟ್ಟ. ಅವನೂ ಆಗತಾನೇ ಹಾಸಿಗೆಬಿಟ್ಟು ಎದ್ದಿದ್ದ. ಇದೆಲ್ಲ ಒಟ್ಟಿಗೆ ಸೇರಿ ಅವನಿಗೆ ಬುದ್ಧಿ ಭ್ರಮಣೆಯಾಗಿದೆ. ಆದೇನು ಸರಿಯಾಗುತ್ತೆ.

ಏನೋ ಪಾಪ! ಈ ಜನರಿಗೋಸ್ಕರ ಅವನು ಹೋರಾಡಿದ. ಕೊನೆಗೆ ಎಲ್ಲರೂ ಅವನ ಕೈಬಿಟ್ಟೇ ಬಿಟ್ಟರು. ಒಬ್ಬೊಬ್ಬರಾಗಿ ಎಲ್ಲಾ ಕೆಲಸಕ್ಕೆ ಹೋಗಿ ಸೇರಿಕೊಂಡರು. ಕೊನೆಗೆ ಉಳಿದೋರು ನಾವು ಐದಾರು ಜನ ಮಾತ್ರ.

೧ನೆಯವನು

ನಮಗೂ ಎಂದು ಏನು ಬರುತ್ತೋ ಗೊತ್ತಿಲ್ಲ.

ಒಳಗೆ ಹೋದವರು ತಾನೆ ಒಳ್ಳೇಮನಸ್ಸಿನಿಂದ ಹೋಗಿದಾರೇನು! ಯತ್ನವಿಲ್ಲದೆ ಹೋಗಿದಾರೆ. ಸಮಯ ಬಂದಾಗ ಅವರೂ ನಮ್ಮ ಜೊತೇನೇ!

೨ನೆಯವನು

ಏನೇ ಬರಲಿ ನಾನು ಬೇರೇ ಕೆಲಸಕ್ಕೆ ಹೋಗೊಲ್ಲ. ನೀವೂ ಕೆಲಸಕ್ಕೆ ಹೋಗೋಲ್ಲವೆಂದು ನನಗೆ ಗೊತ್ತು. ಹೊರಗೇ ಇದ್ದು ಸಮಯನೋಡಿ ಅವನಿಗೆ ತಕ್ಕದ್ದು ಮಾಡಬೇಕು. ಆ ದೊಡ್ಡ ಇದ್ದರೆ ನಮಗೆ ನೂರುಜನ ಇದ್ದಹಾಗೆ. ಅವನು ಎಲ್ಲೇ ಇದ್ದರೂ ಹುಡುಕಿ ಕರೆದು ಕೊಂಡು ಬರೋಣ ಬನ್ನೀ ಹೋಗೋಣ!

ಮರೆಯಾಗುವರು. ಕತ್ತಲಾಗುವುದು. ಹಿಂಭಾಗದ ದೃಶ್ಯವು ಬದಲಾಗುವುದು.

ಹರಕುಬಟ್ಟೆಗಳನ್ನುಟ್ಟು ಕೆದರಿದ ತಲೆಯಿಂದೊಡಗೂಡಿ ಕೈಯಲ್ಲಿ ಹಳೆಯ ಪರಾಯೊಂದನ್ನು ಹಿಡಿದು ಹರಿಯುತ್ತಾ ಹುಚ್ಚನೊಬ್ಬನು ಪ್ರವೇಶಿಸುವನು.

ಅ-ಹ-ಹಾ.... ಜೈಲು.... ಜೈಲು!

ಒಳ್ಳೇ ನಾಟಕ.... ಅ-ಹ-ಹಾ!

ಹುಚ್ಚು, ಹುಚ್ಚು! ನನಗೆ ಹುಚ್ಚು. ಹ-ಹಾ-ಹಾ!

ಆ ಬಟ್ಟೆಯನ್ನು ಮತ್ತಷ್ಟು ಹರಿದು

ದೇವಿ! ನೀನೇನನ್ನುವೆ! ನಾನು ಹುಚ್ಚನೇ! ಯಾರು! ದೇವಿಯನ್ನು ಮುಟ್ಟುವವರಾರು! ನಡೆ!

ಹಿಂದೆಸಿಲ್ಲು! ದೇವಿಯನ್ನು ಮುಟ್ಟಿದರೆ ನಿನ್ನ ಕತ್ತು ಮುರಿದುಹಾಕುವೆನು.

ದೇವಿ! ಹೆದರಬೇಡ! ಹೆದರಬೇಡ! ಈ ಪಾಪಿಗಳನ್ನು ಮಾರಿಗೆ ಬಲಿಕೊಡುವೆನು....

ಅಯ್ಯೋ! ನನ್ನ ದೇವಿಯನ್ನು ಎಳೆಯುತ್ತಿರುವನು! ಬಿಡಿ, ನನ್ನನ್ನು ಬಿಡಿ! ದೇವಿ, ದೇವಿ! ಅಯ್ಯೋ ನನ್ನ ಎದುರಿಗೆ, ಇಂತಹ ಅನ್ಯಾಯನಡೆಯುತ್ತಿದೆಯಲ್ಲಾ ಅಯ್ಯೋ! ನನ್ನನ್ನು ಬಿಡಿ. ಬಂದೆ ಬಂದೆ !

ಮೂರ್ಛೆಬಿದ್ದು ಮೆತ್ತಗೆ

ದೇವಿ! ಇಗೋಬಂದೆ! ಪಾಪಿ! ಕಾರಕ ಬಿಡು. ದೇವಿಯನ್ನು ಬಿಡು. ಇಲ್ಲದಿದ್ದರೆ ನಿನ್ನ ಆಶೆ ಮುಗಿಯಿತು.

ಕನವರಿಸುವನು. ನಂತರ ಕೊಂಚ ಚೇತರಿಸಿಕೊಂಡೆದ್ದು ಕುಳಿತು

ದೇವಿ! ನಿನ್ನಕಷ್ಟವನ್ನು ನೋಡಲಾರೆ. ಈ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಇಷ್ಟೊಂದು ನೊರೆಹೊರುತ್ತಿರುವೆಯಾ!

ಇಜ್ಜಲುಚೂರನ್ನು ತೆಗೆದುಕೊಂಡು ದೇವಿಯ ರೂಪನ್ನು ಗೀಚುವನು. ನಂತರ ಆತನಬಳಿಯಲ್ಲಿ ಕಾರಕನ ಉಡಿಗೆಯಂತಹ ಬಟ್ಟೆಬರೆಗಳನ್ನುಟ್ಟು ಮಾರಿಗನೊಬ್ಬನು ಬಂದುನಿಂತು ಅವನು ಬರೆಯುವುದನ್ನು ನೋಡುತ್ತಿರುವನು.

ಹೌದು! ಬಿಸಿಲು ಉರಿಯುತ್ತಿದೆ. ನಾನೇನುಮಾಡಲಿ, ಆ ಯಮದೂತನು ಇಲ್ಲಿನೋಡುತ್ತಿರುವನು. ಅಲ್ಲಿನೋಡು!

ತಿರುಗಿ ಹತ್ತಿರದಲ್ಲಿ ನಿಂತಿದ್ದವನನ್ನು ಕಂಡು, ಕೋಪೋದ್ರೇಕಗೊಂಡು ಕಾರಕನ ಅಂಗವಸ್ತ್ರವನ್ನು ಹಿಡಿದುಕೊಂಡು !

ಹಾ! ಕಾರಕಾ ಮತ್ತೆ ಇಲ್ಲಿಗೂ ಬಂದೆಯಾ! ನನ್ನ ದೇವಿಯನ್ನು ಹೊಡೆದು ಜೀವದೊಂದಿಗೆ ಬದುಕುವೆಯಾ

ಹೂ....ಇಲ್ಲಿಗೆ ನಿನ್ನಪರಿಣಾಮ ಪೂರ್ತಿಯಾಯಿತು!

ದಾರಿಗ

ಅಪ್ಪಾ ! ಅಪ್ಪಾ ! ನಾನು ಕಾರಕನಲ್ಲ! ನಿನ್ನ ಕಾಲಿಗೆ ಬೀಳುವೆನು, ಬಿಡಪ್ಪಾ, ದಮ್ಮಯ್ಯ!

ಕೈಮುಗಿದು ಅಂಗಲಾಚಿ ಬೇಡಿಕೊಂಡು ಕಾಲುಗಳನ್ನು ಹಿಡಿದುಕೊಳ್ಳಲು ಹೋಗುವನು. ಹುಚ್ಚನು ಅವನ ಮುಖವನ್ನು ದೃಷ್ಟಿಸಿ ನೋಡಿ ಕೈಬಿಟ್ಟು !

ಅ-ಹಾ-ಹಾ.................ಇವನಲ್ಲ.

ಅಯ್ಯೋ ಇವನು ಯಾರೋ! ಇವನನ್ನೇ ಕಾರಕ ಎಂದಿದ್ದೆ.

ಆಹಾ!........ ಅವನು ಸಿಕ್ಕಿದ್ದರೆ!.................. ಏನುಮಾಡಲಿ, ನನ್ನ ಕೈಗೆಸಿಕ್ಕಲಿಲ್ಲ ! ಆಗಲಿ ಎಲ್ಲಿ ಹೋಗುವನು ಇಂದಲ್ಲದಿದ್ದರೆ ನಾಳೆ ಸಿಕ್ಕುವನು.

ಮರೆಯಾಗುವನು

ದಾರಿಗ

ಬದುಕಿದೆ! ಸದ್ಯಕ್ಕೆ ನನ್ನ ಪುಣ್ಯ ಚನ್ನಾಗಿತ್ತು. ಸಾಕಪ್ಪ ಸಾಕು; ಈ ಹುಚ್ಚರ ಸಹವಾಸ.

ಓಡಿಹೋಗುವನು

ಮತ್ತೆ ಹುಚ್ಚನು ಹುರಿಗಳನ್ನು ಹೊಸಿಯುತ್ತಾ ಪ್ರವೇಶಿಸುವನು.

ಹುರಿಯೇಬೇರೆ, ಹಗ್ಗವೇ ಬೇರೆ. ಹುರಿಯಿಲ್ಲದೆ ಹಗ್ಗ ಹೇಗೆ! ಹುರೀಕೀಳಬಹುದು ಹಗ್ಗ (ಎಳೆದು ನೋಡಿ) ಅಬ್ಬಾ ಎಷ್ಟುಗಟ್ಟಿ...ಹಗ್ಗದ ಕೆಲಸ ಹುರೀಲಾಗುತ್ತೆಯೇ? ಇಲ್ಲ ಇಲ್ಲ ! ಹಾಗಾದರೆ ಹುರೀನೇ ಹಗ್ಗ ಮಾಡೋದು. ಅ ಹಾ ಹಾ.

ಆ ಹಗ್ಗದಲ್ಲಿ ಸೋಟನ, ಅವರಪ್ಪನ, ತಾತನ ನೇಣಾಕಬಹುದು.

ಅ-ಹ-ಹಾ !........

ಹಿಂದಿನಿಂದ ಹುಡುಗರು ಒಕ್ಕರೆ, ಕಲ್ಲು ಮಣ್ಣುಂಡೆಗಳನ್ನು ಹುಚ್ಚನಕಡೆಗೆ ಎಸೆಯುವರು, ಅವನು ನಗುತ್ತಾ ಆ ಕಲ್ಲುಗಳನ್ನು ಆರಿಸಿಕೊಂಡು

ಬನ್ನಿ ಬನ್ನಿ! ಯಾಕೆ ಹೆದರಿಕೊಳ್ಳುತ್ತೀರಿ!!

ಹುಡುಗರನ್ನು ಕರೆಯುವನು.

೧ನೇ ಹುಡುಗ

ಲೇ ಹುಚ್ಚ ಹುಚ್ಚಾ! ಅಲ್ಲನೋಡು: ಕರೀತಾನೆ ಬಾರೋ ಹೋಗೋಣ.

೨ನೆಯ ಹುಡುಗ

ಹೂ. ಹೋಗು, ಏಟುತಿನ್ನೋಕೆ. ಅವನ್ನ-ಆ ಹರಾಯಿ ಸೋನ್ನ ಹಿಡಕೊಂಡು ಕುತ್ತಿಗ್ಗೆ ಕೈ ಹಾಕಿದ್ದ! ಅವನ ಪುಣ್ಯಾ ಚನ್ನಾಗಿತ್ತು ಬದಕ್ಕೊಂಡ. ಹತ್ತಿರ ಹೋದ ಮೇಲೆ ಹಿಡಕೊಂಡರೆ ಆಯಿತು ನಮ್ಮ ಆಟ.

೩ನೇ ಹುಡುಗ

ಹುಚ್ಚರಬುದ್ಧಿ ಒಂದು ಘಳಿಗೆ ಇದ್ದಹಾಗೆ ಇನ್ನೊಂದು ಘಳಿಗೆ ಇರೊಲ್ಲ! ನಾಹೋರೆ ಬರೊಲ್ಲಪ್ಪ!

ಹುಚ್ಚ

ಅಹ ಹಾ.......ಅ-ಹ-ಹಾ.......

ಹುಡುಗರು! ಒಳ್ಳೇಹುಡುಗರು! ಏನು ಧೈರ್ಯ.

ಹಗ್ಗವನ್ನು ಬೀಸುವನು. ಹುಡುಗರು ಓಡುವರು.

ಹಿಂದೆಹೋಗಿ ಅಲ್ಲಿಂದ ಕಲ್ಲೆಸೆಯುವನು.

ಹುಚ್ಚ

ಅಂಜುಬುರಕಹುಡುಗರು! ಮರೇಲಿನಿಂತು ಕಲ್ಲ ಹಾಕೋಕೆ ಸರಿ ನಮ್ಮ ಹುಡುಗರು!

ಬನ್ನಿ ಅಂದ್ರು ಓಡತಾರೆ! ಹೋಗೀರಿ, ಹೋಗೀರಿ! ನನಗೆ ಇದರಿಂದ ಕಷ್ಟ ಆಗೊಲ್ಲ.

ನನ್ನ ಚರ್ಮ ಆನೇ ಚರ್ಮ. ತಲೆಗೆ ಹೊಡೀರಿ!" ದಪ್ಪಕಲ್ಲಲ್ಲ ಹೊಡೀರಿ! ನನ್ನ ಸಾಯಿಸಿಬಿಡಿ!

ಆ ಮೇಲೆ ನಾನು ಸುಲಭವಾಗಿ ದೇವಿಹತ್ತಿರಕ್ಕೆ ಹೋಗಬಹುದು.

ಆಲಿಸಿ ಕೇಳಿ

ಯಾರು? ಅದು ಯಾರು! ಅಳುವವರು.

ಅಯ್ಯೋ! ನನ್ನ ದೇವಿ ಅಳುತ್ತಿದಾಳೆ.

ಬಂದೆ! ದೇವಿ ಬಂದೆ!

ಮುಂದರಿದು ಹೋಗುವನು. ಹುಡುಗರು ಮಣ್ಣು ಎರಚುತ್ತ

ಲೋ ಹುಚ್ಚ! ಹುಚ್ಚ!

ಅಟ್ಟಿಸಿಕೊಂಡು ಹೋಗುವರು. ಹುಚ್ಚನೂ ಓಡುವನು ಕತ್ತಲಾಗುತ್ತದೆ. ಮುಂಭಾಗದಲ್ಲಿದ್ದ ದೃಶ್ಯವು ಮಾರ್ಪಡುವುದು.

ಹಿಂಭಾಗದಲ್ಲಿ ಅಗಾಧವಾದ ಹುಲಿಯ ಮುಖವೊಂದು ಕಂಡು ಬರುವುದು. ಅದರ ಮೇಲೆ ಮಸಕು ಮಸಕು ಬೆಳಕು ಬೀಳುತ್ತಿರುತ್ತದೆ.

ಹುಚ್ಚನು ಚಿಂತಾಕ್ರಾಂತನಾಗಿ ಮೆಲ್ಲನೆ ಪ್ರವೇಶಿಸುವನು.

ತನ್ನಲ್ಲೇ ತಾನೆ!

ಹುಚ್ಚ... ಹುಚ್ಚ.... ನಾನೊಬ್ಬ ಹುಚ್ಚ.

ಇಲ್ಲಿಯವರೆಗೆ ಕಂಡ ಕಂಡವರೆಲ್ಲ ನನ್ನನ್ನೀಗ ಹುಚ್ಚ ನೆನ್ನುವರು! ನಾನೇ ಹುಚ್ಚನೋ ಇವರೇ ಹುಚ್ಚರೋ?

ನಿಜವಾದ ನನ್ನ ವಿಷಯ ಇತರರಿಗೆ ಹೇಗೆ ತಿಳಿಯಬೇಕು?

ಹುಚ್ಚ ಅಂದರೆ ಏನು?

ಏನು ಹರಕು ಬಟ್ಟೆ ಹಾಕಿಕೊಂಡು ಮನಸ್ಸಿನಲ್ಲಿ ಬಂದದ್ದನ್ನು ಮರೆಮಾಚದೆ ಹೇಳೋರೇ!

ಅದಕ್ಕೇ ಜನ ಮಹಾತ್ಮಾ ಗಾಂಧೀನೂ ಹುಚ್ಚ ಅಂತಾರೆ!

ಆಹಾಹಾ....... ಒಳ್ಳೇ ಜೊತೆ.

ನಾನೆಲ್ಲಿ ಗಾಂಧಿಯೆಲ್ಲಿ! ಅದಕ್ಕೆ ನನಗೆ ಕಲ್ಲೆಸೀತಾರೆ!

ಈ ಪ್ರಪಂಚವೆ ಹೀಗೋ ಏನೋ.

ಎಲ್ಲಿ ನೋಡಿದರೂ ಹಿಂಸೆ, ಮೋಸ, ಸುಳ್ಳು, ಠಕ್ಕು.

ಇದೆಲ್ಲ ಇದ್ದರೆ ಸರಿ, ಇಲ್ಲದೇ ಇದ್ದರೆ ಅವನು ಹುಚ್ಚನೆನ್ನೋ!

ರಂಗದ ಹಿಂಭಾಗದಲ್ಲಿ ಹುಲಿಯು ಆರ್ಭಟ ಕೇಳಿಬರುತ್ತದೆ.

ಹುಚ್ಚ

ಏನಿದು! ಏನೋ ಭಯಂಕರ ಧ್ವನಿಯು ಕೇಳಿ ಬರುತ್ತಿದೆ.

ಏನೂ ಇಲ್ಲ! ಇದೆಲ್ಲಾ ನನ್ನ ಹುಚ್ಚು.

ಹುಲಿಯು ಅರ್ಭಟಿಸಿ ಮೆಲ್ಲಗೆ ಹೆಬ್ಬಾಯಿ ತೆರೆಯುವುದು.

ಹುಲಿ, ಹುಲಿ! ಅಯ್ಯೋ ನಮ್ಮನ್ನೆಲ್ಲಾ ನುಂಗಿಬಿಡುವುದು. ಮುಂದೇನುಗತಿ.

ಜನರು ಆತುರದಿಂದ ಬರುವರು, ನಂತರ ತೆರದ ಆ ಬಾಯಿಯೊಳಗೆ ನುಗಲು ಪ್ರವೇಶಿಸುವರು.

ಹುಚ್ಚ

ಹುಲಿ-ಹುಲಿ-ಅಲ್ಲಿ ಹೋಗಬೇಡಿ. ಹೋಗಬೇಡಿ!

ಜನರು ತಿರಸ್ಕಾರದಿಂದ ತಿರುಗಿ ನೋಡಿ ಬಾಯಿಯೊಳಗೆ ಪ್ರವೇಶಿಸುವರು.

ಅಯ್ಯೋ-ಅಯ್ಯೋ ತಾವಾಗಿಯೇ ಹುಲಿಗೆತುತ್ತಾಗುವರು. ನನ್ನ ಮಾತನ್ನು ಕೂಡಾ ಲಕ್ಷಿಸಲಿಲ್ಲ.

ಹುಲಿಯ ಬಾಯಿಯೂ ನಿಧಾನವಾಗಿ ಮುಚ್ಚುವುದು.

ಹಾ....ಅಯ್ಯೋ....ಅ....ಹಾ

ನಾನು ಹುಚ್ಚ! ನನ್ನ ಮಾತನ್ನು ಯಾರು ಕೇಳುವರು.

ಕೆಳಗೆ ಬೀಳುವನು

ತೆರೆಬೀಳುವುದು

## ಅಂಕ ೨. ನೋಟ. ೨

ರಂಗದ ಹಿಂಭಾಗದಲ್ಲಿ ಕತ್ತಲು. ಮುಂಭಾಗದಲ್ಲಿ ಮಸಕಾಗಿ ಬೆಳಕು ಬೀಳುತ್ತಿರುವುದು. ಮೋಟಾರು ಶಬ್ದ ಕೇಳಿಬರುವುದು. ಸ್ವಲ್ಪ ಹೊತ್ತಿನ ಮೇಲೆ ದಾಮೋದರಸೇಟೂ ಕುಮಾರನೂ ಪ್ರವೇಶಿಸುವರು.

**ದಾಮೋದರ ಸೇಟು**

ಆಗಲಿ ನೋಡೋಣ. ಈಗ ನನ್ನಲ್ಲಿದ್ದ ಹಣವೆಲ್ಲಾ ಖರ್ಚಾಗಿಹೋಗಿದೆ. ಸ್ವಲ್ಪದಿನ ಕಳೆಯಲಿ, ಕೊಡುವೆನು. ದೇವಿಯ ಸಮಾಚಾರವೇನು? ಅವಳನ್ನು ಒಪ್ಪಿಸಿದೆಯೋ.

**ಕುಮಾರ**

ಒಪ್ಪುತ್ತಾಳೆ. ಆದರೆ ಇನ್ನೂ ಕೊಂಚ ಸಾವಕಾಶ.

**ಸೇಟು**

ನೀನು ಹೀಗೇ ಹೇಳುತ್ತಾ ಇದೀಯೆ! ಎಲ್ಲರಿಗಿಂತ ಅವಳೇನು ಹೆಚ್ಚು! ನೀನು ಸರಿಯಾಗಿ ಪ್ರಯತ್ನ ಪಡುವುದಿಲ್ಲ.

**ಕುಮಾರ**

ನಿಮಗೇನುಗೊತ್ತು ನಮ್ಮ ಕಷ್ಟ! ಅವಳನ್ನು ಒಪ್ಪಿಸೋಕೆ ಪಟ್ಟಿರೋಕಷ್ಟ, ಯಾವಾಗಲೂ ಪಡಲಿಲ್ಲ. ನೀವು ಕೊಟ್ಟಿರೋದಿರಲಿ; ನನ್ನ ಕೈಯಿಂದ ಇದಕ್ಕಾಗಿ ಎಷ್ಟೋ ಖರ್ಚುಮಾಡಿದೀನಿ. ಆದರೂ ಇನ್ನೂ ಊ ಹೂ ನೇ! ಆದೊಂದು ಮೊಂಡು ಹುಡುಗಿ ಅನ್ನಾನೀರೂ ಬಿಟ್ಟು ಅಳುತ್ತಾ ಕೂತಿದೆ. ಮಾತಾಡಿಸಿದರೆ ಮುಖಾಕೊಟ್ಟು ಮಾತೂ ಆಡೊಲ್ಲ. ಹೀಗೇ ಇನ್ನೆಷ್ಟುದಿನ ಇರುತ್ತೆ! ನಾನು ಅದಕ್ಕೆಲ್ಲ ಸರೀಮಾಡತೀನಿ, ನೀವು ಕೊಂಚ ಸುಮ್ಮನಿರಿ! ನೋಡಿ ನೀವು ಅವರಪ್ಪ ಕಾಳನ್ನ ಮತ್ತೆ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿಸಿ

ಕೊಂಡದ್ದೇ ತಪ್ಪು. ಅವನು ಸನ್ನಾಹ ಮಾಡು ತಾನೆ ಇದಾನೆ. ಅವನು ಹತ್ತರ ಇರೋದೇ ಒಳ್ಳೇದಲ್ಲ. ಏನಾದರೂ ಮಾಡಿ ಅವನ್ನ ದೂರಾ ಮಾಡಬೇಕು.

ಹತ್ತಿರದಲ್ಲಿ ಗಲಭೆಯಾಗುವುದು. ಗುಂಪು ನುಗ್ಗಿ ಬರುವಂತೆ ತೋರುವುದು. ಗುಂಡು ಹಾರುವುದು. ಹಾ ಹಾ ಕಾರ. ಜನರು ಚಲ್ಲಾಪಿಲ್ಲಿಯಾಗಿ ಓಡುವರು.

ಸೇಟು

ಏನು. ಇಷ್ಟೊಂದು ಸದ್ದು! ಮತ್ತೆ ಗಲಭೆಯೋ!

ಕುಮಾರ

ಓಹೋ ಗುಂಡಿನಸದ್ದು ಕೇಳುತ್ತೆ. ಏನೋ ದೊಂಬಿ ಎದ್ದಿರಬೇಕು!

ಹಿಂದೆ ಸರಿಯುವನು. ಸೇಟು ಭಯಗ್ರಸ್ತನಾಗಿ ಮರೆಯಾಗು ವನು. ಕಾರಕನು ಒಂದು ಕೈಯಲ್ಲಿ ರಿವಾಲ್ವಾರ್ ಹಿಡಿದು ದೇವಿಯನ್ನು ಎಳೆದುಕೊಂಡು ಮುಂದೆ ಬರುವನು. ದೇವಿಯು ನಗುಡುತ್ತಿರುವಳು.

ಕಾರಕ

ಕದ್ದು ಓಡುವೆಯಾ! ನಾನು ಯಾರೆಂದು ತಿಳಿ ಯದೇ! ನಿಮ್ಮ ಕಡೆಯವರನ್ನೆಲ್ಲ ಒಟ್ಟಿಗೆ ಸುಟ್ಟು ಬಿಡುವೆನು. ಎಚ್ಚರಿಕೆ! ಇಲ್ಲಿರುವುದೇನು ನೋಡು!

ರಿವಾಲ್ವರನ್ನು ತೋರುವನು. ದೇವಿಯು ಮತ್ತಷ್ಟು ಹೆದರಿ, ಒಂದೂ ತೋರದೆ ಆಕಾಶವನ್ನು ನೋಡುತ್ತಾ,

ಅಪ್ಪಾ! ಅಪ್ಪಾ! ಅಯ್ಯೋ!

ಕಾರಕ

ಅಪ್ಪಾ! ಇನ್ನೂ ನಿಮ್ಮ ಅಪ್ಪನ ಆಶೆ ಉಳಿದಿ ದೆಯೆ! ಅವನು ಗುಂಡಿನಬಾಯಿಗೆ ತುತ್ತಾದನು. ನೀನೇನಾದರು ಸುಖವಾಗಿರಬೇಕೆಂಬ ಆಶೆಯಿದ್ದರೆ ನಾನು ಹೇಳಿದಂತೆ ಕೇಳು.

ದೇವಿ

ಅಯ್ಯೋ ದೇವರೇ, ನೀನೆಲ್ಲಿದ್ದಿಯೋ! ನನ್ನಪ್ರಾಣ ನಾದರೂ ತೆಗೆದುಕೊಳ್ಳಬಾರದೆ!

ದೇವಿಯು ಪ್ರಜ್ಞೆತಪ್ಪಿ ಕೆಳಗೆ ಬೀಳುವಳು.

ಸೇಟು

ಪ್ರವೇಶಿಸುತ್ತಾ

ಏನಿದು! ಇವಳು ಇಲ್ಲಿಗೆ ಹೇಗೆ ಬಂದಳು? ಇದೇನು ಇಷ್ಟೊಂದು ಗಲಭೆ.

ಕಾರಕ

ಹರಾಮ್, ಸಾಹುಕಾರ್ ಆ ಕಾಳ ಹೊಂಚು ಹಾಕುತಾ ಇದ್ದು ಇವಳನ್ನು ಕದ್ದುಕೊಂಡು ಓಡಿ ಹೋಗುತ್ತಿದ್ದ. ನನಗೆ ಇದು ತಿಳಿದು ಓಡಿಬಂದು ಹಿಡಿದೆ. ತುಂಟರನ್ನು ಸೇರಿಸಿಕೊಂಡು ಬೇರೇ ಊರಿಗೆ ಇಬ್ಬರೂ ಪರಾರಿಯಾಗುತ್ತಿದ್ದರು. ನಾನು ಬಂದುದ್ದನ್ನು ನೋಡಿ; ನನ್ನೇ ಸಾಯಿಸಿಬಿಡಬೇಕು ಅಂತ ಮೇಲೆ ಬಿದ್ದರು. ನಾನು ಬಗ್ಗಲಿಲ್ಲ. ಕೊನೆಗೆ ಗುಂಡು ಹಾರಿಸ ಬೇಕಾಯಿತು. ಏಟು ಕಾಳನಿಗೆ ಸರಿಯಾಗಿ ಬಿತ್ತು. ಆಮೇಲೆ ಇವಳನ್ನ ಇಲ್ಲಿಗೆ ಎಳದುಕೊಂಡು ಬಂದೆ.

ಸೇಟು

ಅವರೆಲ್ಲಿರು ಈಗ?

ಕಾರಕ

ನನ್ನ ಗುಂಡಿನ ಸದ್ದು ಕೇಳಿ ಎಲ್ಲರೂ ಪರಾರೀನೇ!

ಸೇಟು

ಕೆಳಗೆಬಿದ್ದವನು? ಅವನೇನು ಸತ್ತನೋ ಬದಕಿದನೊ?

ಕಾರಕ

ಬದಕಿರಲಾರ. ದಪ್ಪಗುಂಡೇ ಹಾಕಿದ್ದೆ. ನಾನು ಈಕಡೆ ತಿರುಗಿದ್ದು ಕಂಡು ಅವರೆಲ್ಲಾ ಬಂದು

ಕಾಳನನ್ನು ಎತ್ತಿಕೊಂಡು ಹೋದರು. ಅವರೂ ಇಲ್ಲೇ ಎಲ್ಲೋ ಇರಬೇಕು.

ಕುಮಾರ

ಸತ್ತಿದ್ದರೆ ತಂಟೇನೆ ಇಲ್ಲ. ನಮ್ಮಕೆಲಸ ಆದಹಾಗೇ ಲೆಖ್ಖ!

ಸೇಟು

ಓ! ಗುಂಡುಹಾರಸದೇ ಇದ್ದರೆ ಚನ್ನಾಗಿತ್ತು. ಅವನು ಸತ್ತರೂ ಕಷ್ಟ; ಇದ್ದರೂ ಕಷ್ಟ. ಪೋಲೀಸಿನೋರ ಇಂಥಾವನ್ನೇ ಕಾಯುತಾ ಇರುತ್ತಾರೆ! ಹೂ! ಇನ್ನೇನು ಮಾಡೋದು. ಏನಾದರೂ ಸರಿ; ಇವಳನ್ನು ತಂದು ಮೋಟಾರಿಗೆ ಹಾಕು. ಹೊರಡೋಣ, ಇನ್ನು ಇಲ್ಲಿರೋದು ಸರಿಯಲ್ಲ.

ಪ್ರಜ್ಞೆತಪ್ಪಿಬಿದ್ದಿದ್ದ ದೇವಿಯನ್ನು ಕುಮಾರನೂ ಕಾಲಕನೂ ಎತ್ತಿಕೊಂಡು ಹೋಗುವರು.

ಸೇಟು (ಸ್ವಗತ)

ಯಾಕೋ ಪ್ರಸಂಗ ಬರುತಾ ಬರುತಾ ರಂಪಕ್ಕಿಟ್ಟುಕೊಂಡಿದೆ. ಇನ್ನೂ ಏನೇನಾಗತ್ತೋ ಒಂದೂ ತೋರೊಲ್ಲ. ಹೆದರಿಕೆಯಾಗುತ್ತೆ.

ಇಷ್ಟಾದರೂ ಆ ಹುಡುಗಿ ಬಿಡೋಕೆ ಮನಸ್ಸು ಒಪ್ಪೊಲ್ಲ. ಆಗಲಿ ಇದರಿಂದ ಆಗೋದೇನು? ಕಡೆ ತನಕ ನೋಡಿಯೆ ಬಿಡುತ್ತೇನೆ.

ಮರೆಯಾಗುವನು. ಮತ್ತೆ ಮೋಟಾರು ಧ್ವನಿಯಾಗುವದು. ಸ್ವಲ್ಪ ಹೊತ್ತಿನಮೇಲೆ ಕೆಲವು ಜನರು ಮುಂದೆ ಬರುವರು. ಮುಖದಲ್ಲಿ ದುಃಖವೂ ಕೋಪವೂ ವ್ಯಕ್ತವಾಗುತ್ತಿರುವುದು.

ಗುಂಪು

ಏನು ಏನು? ಸತ್ತೇಹೋದನೆ!

ಒಬ್ಬ

ಇಲ್ಲ. ಇನ್ನೂ ಸತ್ತಿಲ್ಲ. ಆದರೆ ಬದುಕೋ ಹಾಗಿಲ್ಲ. ಎದೆಗೇ ಬಿದ್ದಿದೆ ಏಟು.

ಮತ್ತೊಬ್ಬ

ನಮ್ಮ ಕೈಗೆ ಆ ಕಾರಕ ಸಿಕ್ಕಿದ್ದಾಗ ಬಿಟ್ಟದೇ ತಪ್ಪು. ಹಾವಿಗೆ ಅಯ್ಯೋ ಅಂದ ಹಾಗೆ ಆಯಿತು, ಅವನ್ನ ಬಿಟ್ಟದ್ದು. ಈಗ ನೋಡಿ ಅವನೊಬ್ಬನೇ ನಮ್ಮನ್ನೆಲ್ಲಾ ಹೆದರಿಸಿ ಚದರಿಸಿಬಿಟ್ಟ! ಇನ್ನು ನಾವು ಇದ್ದೇನು ಫಲ.

ಮೂರನೆಯವನು

ಅದೆಲ್ಲಾ ಮದ್ದಾಗುಂಡಿನ ಪ್ರಭಾವ. ಈಗ ಅದಕ್ಕೇ ಕಾಲ. ಆಗಲಿ, ಆಗಲಿ.

ಸುಮ್ಮನೆ ಆತುರಪಟ್ಟು ಫಲವಿಲ್ಲ. ಇದಕ್ಕೆಲ್ಲಾ ತಕ್ಕ ಫಲ ಅವರು ಅನುಭವಿಸಬೇಕಾಗುತ್ತೆ.

ಆದರೆ ಹಿಂದೆ ಮುಂದೇ ನೋಡಿಕೊಂಡು ಯುಕ್ತಿಯಿಂದ ಕೆಲಸಮಾಡಬೇಕು.

೨ನೆಯವನು

ಏನಾದರೂ ಆಗಲಿ, ಈಗಲೇ ಹೋಗಿ ಅವನ್ನು ಮುಗಿಸಿ ಬಿಡಬೇಕು.

೩ನೆಯವನು

ಹೋಗಿರೋರು ಬರಲಿ. ದೊಡ್ಡನೂ ಬಂದರೆ ನಮಗೆ ಅನುಕೂಲ.

ಅವನ್ನು ಕಂಡರೆ ಎಲ್ಲಾರೂ ನಡುಗುತಾರೆ. ನಮ್ಮವರಿಗೂ ಧೈರ್ಯ.

೨ನೆಯವನು

ಅಯ್ಯೋ! ಅವನಿಗೆ ಹುಚ್ಚು ಹಿಡಿದಿದೆ. ಅವನ್ನ ಕಟ್ಟಿಕೊಂಡು ಮಾಡೋದೇನು ?

೪ನೆಯವನು

ಅವನ ಹುಚ್ಚು ನನಗೆ ಗೊತ್ತಿದೆ. ಅವನಿಗೆ ಹುಚ್ಚು ಹಿಡಿಸಿದವನು ಈ ಕಾರಕ. ನಾವೆಲ್ಲಾ ಒಟ್ಟಿಗೆ ಸೇರಿ ದೇವೀನ ಬಿಡಿಸತೀವಿ ಅಂದರೆ ಹುಚ್ಚುಗಿಚ್ಚೆಲ್ಲ ಓಡಿ ಹೋಗುತ್ತೆ.

ಇಲ್ಲಿ ನಡಯುವ ನರಕಯಾತನೆಯನ್ನು ನೋಡಿ ನೋಡಿ ಅವನಿಗೆ ಹೀಗಾಗಿದೆ. ಅಷ್ಟೇ! ನಡೆಯಿರಿ ಹೋಗಿ ಕೆಲಸದವರನ್ನೆಲ್ಲಾ ಸಮಾಧಾನ ಮಾಡೋಣ.

ಈ ಊರೋರನ್ನೂ ಕರೆದು ತೋರಿಸಿದರೆ ಅವರೂ ಅಯ್ಯೋ ಅಂದೇ ಅಂತಾರೆ.

ಹೊರಡುವರು.

ತೆರೆಬೀಳುವುದು.

## ಅಂಕ ೨. ನೋಟ ೩.

ಒಂದು ಕಂಬಳಿಯ ಮೇಲೆ ಕಾಳಯ್ಯನು ಮಲಗಿರುವನು. ಕೆಲವು ಕೆಲಸಗಾರರು ತಲೆಯ ಮೇಲೆ ನೀರು ತಟ್ಟಿ ಎದೆಯ ಮೇಲೆ ಬಟ್ಟೆಯನ್ನು ಕಟ್ಟಿ ಉಪಚಾರ ಮಾಡುತ್ತಿರುವರು.

ಕಾಳಯ್ಯ

(ಹೊರಳುವನು)

ಹಾ! ಅಯ್ಯೋ!
ದೇವೀ! ಅಪ್ಪಾ.
ನನ್ನ ದೇವಿ ಬಿಡಿಸೀ!
ದೇವೀ!! ಅಯ್ಯೋ!!

ಜನರು

ಅಯ್ಯೋ, ಪಾಪ! ಅವನು ಎಂಥಾನೀಚ!.
ಈ ಮುದುಕ ಅವರಿಗೇನು ಮಾಡಿದ.

ಕಾಳಯ್ಯನನ್ನು ಉದ್ದೇಶಿಸಿ

ತಾತ ! ಯೋಚಿಸಬೇಡ.

ನಾವು ದೇವಿಯನ್ನು ಬಿಡಿಸಿಕೊಂಡು ಬರುತ್ತೇವೆ.

ದೊಡ್ಡನನ್ನು ಕರೆತರುವುದಕ್ಕೆ ಜನರು ಹೋಗಿದಾರೆ. ಅವರು ಬಂದ ಮೇಲೆ ಮೊದಲನೆಯ ಕೆಲಸವೇ ದೇವಿಯನ್ನು ಬಿಡಿಸುವುದು. ಆ ಕಾರಕನಿಗೆ ತಕ್ಕದ್ದು ಮಾಡದೇ ಬಿಡೊಲ್ಲ.

ಕಾಳ

ಆ - - - ನನ್ನ ದೇವಿಯನ್ನು ಮತ್ತೆ ನೋಡುವೆನೇ! - - - ಅವಳನ್ನು ಬಿಡಿಸುವಿರಾ! - - ಅಪ್ಪಾ!

ಹೊರಳುವನು. ಕೆಲವು ಕೆಲಸಗಾರರೂ ದೊಡ್ಡನೂ ಪ್ರವೇಶಿಸುವರು.

ದೊಡ್ಡ

ನಾನೊಬ್ಬ ಹುಚ್ಚ. ನಾನು ಬಂದು ಮಾಡುವುದೇನು ?

ಕೆಲಸಗಾರ

ಈಸಾರಿ ಹಿಂದಿನಂತಾಗುವುದಿಲ್ಲ. ಎಲ್ಲರಿಗೂ ಬಿಸೀ ತಾಕಿದೆ. ನೀನು ಏನು ಹೇಳಿದರೂ ಕೇಳುತ್ತಾರೆ. ಪ್ರಾಣಕೊಡೋಕೂ ಸಿದ್ಧವಾಗಿದಾರೆ. ಆದರೆ ಮುಂದೆ ನಿಂತು ಧೈರ್ಯ ಹೇಳಿ ನಡೆಸಲು ನೀನು ಇದ್ದರೆ ಸಾಕು!

ದೊಡ್ಡ

ಆಗಲಿ, ಬನ್ನೀ ಹೋಗೋಣ.

ಕೂಲಿಕಾರರು ಕೊಂಚ ಮುಂದೆ ಹೋಗುವರು.

ದೊಡ್ಡನು ಕೈಯಲ್ಲಿದ್ದ ಹಗ್ಗವನ್ನು ಉದ್ದವಾಗಿ ಹರಡಿ ಎಳೆದು ನೋಡಿ.

ಈ ಸಾರಿ ಏನಾಗುವುದೋ ನೋಡಬೇಕು.

ಮಾನವಾಗಿ ಉಳಿಯಬೇಕು, ಇಲ್ಲ ಸಾಯಬೇಕು.

ಪಾಪ! ದೇವಿಯು ಪಾಡೇನಾಗಿದಿಯೋ! ಅವರೆಲ್ಲಾ ನನ್ನ ಹುಚ್ಚಾ ಅಂತ ಹೇಳಿದರೂ ನನ್ನ ಬಿಡೊಲ್ಲ. ಆಗಲಿ ಏನೇನಾಗುತ್ತೋ ನೋಡೋಣ.

ಕಾಳಯ್ಯನು ಮಲಗಿರುವ ಕಡೆ ಬರುವರು.

ಕಾಳಯ್ಯ

ಎಲ್ಲಿ ದೊಡ್ಡ, ಎಲ್ಲಿ?

ದೊಡ್ಡಯ್ಯನು ಮುಂದೆ ಬಂದು ಕಣ್ಣೀರು ಹಾಕುತ್ತಾ.

ಕಾಳಯ್ಯ

ಮಾವಾ! ಬಂದೇ! ನಾನು ಬದುಕಿದ್ದೇನು ಫಲ. ಆಗಬಾರದ್ದೆಲ್ಲಾ ಆಗುತ್ತಿದ್ದರೂ ನಾವು ನೋಡುತ್ತಾ ಇದೇವೆ.

ಕಾಳಯ್ಯ

ಅಪ್ಪಾ! ಬಂದೆಯಾ. ನನ್ನ ವಿಷಯ ಯೋಚಿಸ ಬೇಕಾಗಿಲ್ಲ. ದೇವಿಯುನ್ನು ಬಿಡಿಸು. ಪಾಪಿಗಳು ಅವ ಳನ್ನು ಸೆರೆಹಾಕಿಕೊಂಡಿದಾರೆ. ಅಯ್ಯೋ ನನ್ನ ತಾಯಿ! ದೇವಿ! ಸಾಯುವ ಹಾಗಾಗಿಹೋಗಿದೆ. ಆದರೂ ಅವರು ಬಿಡೊಲ್ಲ. ಆ ಪಾಪಿ, ಕಾರಕನಿಗೆ ಏನು ಮಾಡಿದರೂ ಸಾಲದು.

ದೊಡ್ಡ

ಮಾವಾ! ನಿನ್ನ ಸ್ಥಿತಿ ಹೇಗಿದೆ.

ಕಾಳಯ್ಯ

ಅಯ್ಯೋ ನನ್ನ ಯೋಚನೆ ಬಿಡು. ನನ್ನ ಕಾಲ ಮುಗೀತು. ನೀನು ದೇವಿಯುನ್ನು ಬಿಡಿಸ್ತೀನಿ ಅಂತ ಪ್ರಮಾಣ ಮಾಡಿದರೆ ನಿಶ್ಚಿಂತೆಯಾಗಿ ಸಾಯಿತೀನಿ. ಅವಳನ್ನು ಎಷ್ಟು ಪ್ರೀತಿಯಿಂದ ಸಾಕಿದ್ದೇನೋ ಅಷ್ಟು ಕಷ್ಟಾಬಂದಿದೆ. ಮುಂದೆ ನೀನೇ ಅವಳನ್ನು ನೋಡಿ ಕೊಳ್ಳಬೇಕು.

ಇನ್ನು ಮಾ - ಮಾತು - - ಆಗೊಲ್ಲ. ದೇವಿ - ದೇವಿ - - - -

ಮುಖವನ್ನು ತಿರುಗಿಸಿಬಿಡುವನು.

ದೊಡ್ಡ

ಅಯ್ಯೋ! ಪಾಪ! ಸಾಯುವಾಗ ಕೂಡಾ ತನ್ನ ಮಗಳನ್ನು ನೋಡುವುದಕ್ಕಿಲ್ಲವಾಯಿತೇ!

ಜನರು

ದುಃಖಿಸುತ್ತಾ.

ಕಡೆಗೂ ಹೀಗಾಗಿ ಹೋಯಿತೇ! ದೇವಿಯು ಇದನ್ನು ಕೇಳಿದರೆ ಎಷ್ಟು ದುಃಖಿಸುವಳೋ!

ಇಷ್ಟಾದರೂ ಆ ಪಾಪಿಗಳಿಗೆ ಕರುಣಬಾರದು.

ದಾರಿಯಲ್ಲಿ ಹೋಗುತ್ತಿದ್ದ ಪೂರ್ಣಾನಂದನೆಂಬ ಶ್ರೀಮಂತನು ಜೊತೆಗಾರನೊಂದಿಗೆ ಕುತೂಹಲದಿಂದ ಮುಂದೆ ಬಂದು—

ಪೂರ್ಣಾನಂದ

ಏನು! ಏನಾಯಿತು! ಯಾತಕ್ಕಾಗಿ ದುಃಖಿಸುತ್ತಿರುವಿರಿ!

ಕೂಲಿಗಾರರು

ಸ್ವಾಮಿ, ಏನು ಹೇಳುವುದು. ಆ ಸೇಟೂ, ಅವನ ಆಳುಗಳೂ ಸೇರಿಕೊಂಡು ನಮಗೆ ಯಮಹಿಂಸೆ ಮಾಡುತ್ತಿರುವರು.

ಪಾಪ, ಈ ಮುದುಕನ ಮಗಳನ್ನು ಎತ್ತಿಕೊಂಡು ಹೋದರು. ಅವಳನ್ನು ಬಿಡಿಸಿಕೊಂಡು ಹೋಗುತ್ತಿದ್ದಾಗ ಅವರ ಕಡೆಯವರು ಗುಂಡಿನಲ್ಲಿ ಹೊಡೆದು ಈ ಮುದುಕನನ್ನು ಕೊಂದುಹಾಕಿದರು.

ಪೂರ್ಣಾನಂದ

ಅಯ್ಯೋ ಪಾಪ! ಏನನ್ಯಾಯ!

ಕೂಲಿಗಾರರು

ಬರೀ ಬಾಯಿಮಾತಿನಿಂದೇನು ಫಲ!

ನಿಮ್ಮಂತಹವರು ಮುಂದೆ ಬಂದು ನಮ್ಮ ಕಷ್ಟಸುಖ ವಿಚಾರಿಸಬೇಕು. ನಮ್ಮದು ತಪ್ಪಿದ್ದರೆ ನಮಗೆ ಹೇಳಿ. ಅವರದು ತಪ್ಪಿದ್ದರೆ ಅವರಿಗೆ ಬುದ್ಧಿ ಕಲಿಸಿ.

ಪೂರ್ಣಾನಂದ

ಅಪ್ಪಾ! ನಮಗೇಕೆ ಈ ತಂಟೆ. ಅವರು ಬಲಾಢ್ಯರು. ಸರಕಾರದವರೆಲ್ಲಾ ಅವರಿಗೆ ಬೇಕಾದವರು. ಅವರು ಏನು ಬೇಕಾದರೂ ಮಾಡಬಲ್ಲರು. ಸುಮ್ಮನೇ ಅವರ ಜೊತೆಯಲ್ಲಿ ಜಗಳ ಕಟ್ಟಿಕೊಳ್ಳುವುದಕ್ಕಿಂತ ಅವರ ಹತ್ತಿರಲೇ ನಿಮ್ಮ ಕಷ್ಟಸುಖ ಹೇಳಿಕೊಂಡು ಸರಿಮಾಡಿಕೊಳ್ಳಬೇಕು. ಅದೆಲ್ಲ ನಿಮ್ಮ ಕೆಲಸ. ಬೇಕಾದರೆ ನಾನು ಏನಾದರೂ ಕೊಂಚ ಹಣ ಕೊಡುವೆನು. ಆದರೆ ನಮ್ಮನ್ನ ಇದಕ್ಕೆ ಎಳೆಯಬೇಡಿ!

ದೊಡ್ಡ

ಊರಲ್ಲಿ ಒಂದು ಮನೆ ಹತ್ತಿಕೊಂಡು ಉರಿಯುತ್ತಿರುವಾಗ ಉಳಿದವರು ನಮಗೇಕೆ ಅದರ ಚಿಂತೆ ಎನ್ನಬಹುದೇ?

ಇಂದು ನಮಗೆ ಬಂದುದು ನಾಳೆ ನಿಮಗೂ ಬಂದೇ ಬರುತ್ತದೆ.

ಅವರು ಹಣವಂತರಾದರೆ ಮಾಡಬಾರದ ಕೆಲಸ ಮಾಡುವುದೇ? ಅವರು ಮಾಡಿದ ಕೊಲೆಯು ನಿಮ್ಮ ಕಣ್ಣಿಗೆ ಕಾಣಿಸುವುದಿಲ್ಲವೇ? ಹೆಣ್ಣುಮಕ್ಕಳನ್ನು ಕದ್ದುಕೊಂಡು ಹೋಗಿ ಅವರ ಮಾನ ತೆಗೆದು; ಜನರನ್ನು ಈ ರೀತಿ ಕೊಲ್ಲುವ ಪಾಪಿಗಳ ಸಂಗಡ ಮತ್ತೆ ಸಂಧಾನವೇ? ಯೋಚಿಸಿ ನೋಡಿ! ಇಂತಹ ಪಾಪ

ಕಾರ್ಯಗಳನ್ನು ಪ್ರತಿನಿತ್ಯದಲ್ಲಿಯೂ ಮಾಡುತ್ತಿರುವರು. ಅವರಿಗೆ ತಕ್ಕ ಶಿಕ್ಷೆ ಅಗತ್ಯವಲ್ಲವೇ ?

ಪೂರ್ಣಾನಂದ

ಹಾಗಾದರೆ ನೀವೇನು ಮಾಡಬೇಕೆನ್ನುವಿರಿ ?

ದೊಡ್ಡ

ನಾವು ಆತನಿಗೆ ತಕ್ಕ ಬುದ್ಧಿ ಕಲಿಸಬೇಕೆಂದಿರುವೆವು. ಅವರು ನಿರ್ಬಂಧದಲ್ಲಿಟ್ಟಿರುವ ದೇವಿಯನ್ನು ಬಿಡಿಸುವುದು ಮೊದಲನೆಯ ಕಾರ್ಯ.

ನಾವು ಆ ಕಾರಕನನ್ನು ತುಂಡುತುಂಡಿಗೆ ಕತ್ತರಿಸಬೇಕೆಂದಿದ್ದೇವೆ. ಆ ಸೇಟು ! ಪಾಪಿ ; ಅವನನ್ನು ಈ ಹಗ್ಗದಲ್ಲಿ ನೇಣು ಹಾಕುವೆನು. ನಾವೂ ನಮ್ಮ ಜೀವದ ಮೇಲಿನ ಆಸೆಗಳನ್ನು ಬಿಟ್ಟದ್ದೇವೆ. ನಮ್ಮ ರಕ್ತ ಕುದಿಯುತ್ತಿದೆ. ಇಂತಹ ಪಾಪಿಗಳಿಗೆ ಶಿಕ್ಷೆಯನ್ನು ವಿಧಿಸದೇ ಬಿಡುವುದಿಲ್ಲ.

ನಮ್ಮ ಕೆಲಸಗಾರರೆಲ್ಲರೂ ಈ ಸಾವಿನಿಂದ ರೇಗಿ ಹೋಗಿದ್ದಾರೆ.

ಪೂರ್ಣಾನಂದ

ಈ ಬಗೆಯ ಆವೇಶದಿಂದ ಪ್ರಯೋಜನವೇನು ! ಸಂಧಾನದಿಂದಲೇ ಕಾರ್ಯಸಾಧನೆಯಾಗುವುದಾದರೆ ಒಳ್ಳೆಯದಲ್ಲವೇ !

ದೊಡ್ಡ

ನಮಗೆ ಅದರಲ್ಲಿ ನಂಬಿಕೆಯಿಲ್ಲ. ಆದರೆ ನಿಮ್ಮ ಅಭಿಲಾಷೆಗೆ ಪ್ರತಿ ಹೇಳುವುದಿಲ್ಲ. ತಾವೇ ಹೋಗಿ ಪ್ರಯತ್ನಿಸಿ ನೋಡಿ. ನಾವು ಸಿದ್ಧರಾಗಿ ಹೊರ ಭಾಗದಲ್ಲಿ ಕಾದಿರುವೆವು. ನಿಮ್ಮ ಮಾತಿಗೆ ಅವನು ಒಪ್ಪದೇ ಹೋಗುವುದಾದರೆ ಮುಂದೆ ನಮ್ಮ ಕೆಲಸ ನಾವು ನೋಡುವೆವು.

ಆಗಬಹುದು. ಬನ್ನೀ ಹೋಗುವ.

ಹೊರಡುವರು

ತೆರೆ ಬೀಳುವುದು

---

**ಅಂಕ ೨. ನೋಟ ೪.**

ಸೇಟು ತನ್ನ ದಿವಾನ್‌ಖಾನೆಯಲ್ಲಿ ಕುಳಿತಿರುವನು. ಮುಂಭಾಗದ ಚೌಕಿಯ ಮೇಲೆ ಕುಡಿತದ ಬಟ್ಟಲು, ಚುಟ್ಟ ಮುಂತಾದುವು ಇರುವುವು. ಸೇಟು ಇವುಗಳಲ್ಲಿ ಆಸಕ್ತಿಯನ್ನು ತೋರದೆ ಭಯಗ್ರಸ್ತನಾಗಿ ಕಾರಕನನ್ನು ಕುರಿತು—

ಸೇಟು

ನೀನು ಮಾಡುವುದೆಲ್ಲ ಹೀಗೆ! ಮುಂದೇನುಗತಿ! ಮೊದಲೇ ನಮ್ಮ ಮೇಲೆ ದ್ವೇಷವನ್ನು ಸಾಧಿಸುತ್ತಿದ್ದವರು ಕಾಳನ ಸಾವಿನಿಂದ ರೇಗಿರುವರು. ಅವರು ದಂಗೆ ಎದ್ದರೆ ತಡೆಯುವವರಾರು?

ಹೋಗು. ಈಗಲೇ ಹೋಗಿ ಅವರೊಡನೆ ಸಮಾಧಾನ ಮಾಡಿಕೊಂಡು ಬಾ, ಹೋಗು!

ಕಾರಕ

ಸೇಟ್ ಜೀ! ಇಷ್ಟೇಕೆ ಹೆದರುವಿರಿ! ಈ ಕೂಲಿಗಳ ಬೆದರಿಕೆಗೆ ಹೆದರಿದರೆ ಮುಂದೆ ಕೆಲಸ ನಡೆಸುವುದಾದರೂ ಹೇಗೆ. ನೀವು ಕೊಂಚ ಹೆದರಿದಿರಿ ಎಂದು ತಿಳಿದರೆ ಮುಗಿಯಿತು, ನಮ್ಮ ಕೆಲಸ.

ಅವರು ಹೇಳುವ ಷರತ್ತುಗಳಿಗೆ ಒಪ್ಪುವುದಾದರೂ ಸಾಧ್ಯವೇ?

ಸೇಟು

ನಿನ್ನ ಸಲಹೆಯೇನು, ಬೇಗ ಹೇಳು. ಏನು ಇಷ್ಟೊಂದು ಜನ ಕೂಲಿಯವರನ್ನು ತಡೆದು ನಿಲ್ಲಿಸುವೆಯಾ!

ಕಾರಕ

ನಾನು ಇದಕ್ಕೆಲ್ಲಾ ತಕ್ಕದ್ದು ಯೋಚಿಸಿದೇನೆ. ನಮ್ಮ ಕಡೆಯುವರಿಗೆಲ್ಲ ಎಚ್ಚರವಾಗಿರುವಂತೆ ಹೇಳಿದೇನೆ. ಅವರೆಲ್ಲ ಸಿದ್ಧವಾಗಿದಾರೆ. ಯಾಗವಾ ಬೇಕಾದರೂ ಆಯುಧಗಳನ್ನು ತೆಗೆದುಕೊಂಡು ಬರುವರು.

ಇಗೋ ಈ ಶಿಲ್ಪಿಯನ್ನೂದಿದರೆ ಸಾಕು; ಅವರು ಸಹಾಯಕ್ಕೆ ಬರುವರು. ನಾನೊಬ್ಬನೇ ಬೇಕಾದರೂ ಅವರನ್ನೆಲ್ಲಾ ಅಡಗಿಸಿಬಿಡುವೆನು. ನಿಮ್ಮಮುಟ್ಟಿಗೆ ನೀವು ಧೈರ್ಯವಾಗಿರಿ. ಏನುಬಂದರೂ ನಾನು ನೋಡಿಕೊಳ್ಳುವೆನು.

ಹೊರಭಾಗದಲ್ಲಿ ಜನರ ಸದ್ದು ಕೇಳುವುದು. ಸೇಟು ಮತ್ತಷ್ಟು ಗಾಬರಿ ಬಿದ್ದು.

ಸೇಟು

ಅಗೋ! ಬಂದೇ ಬಂದರು. ಇನ್ನೇನು ಮಾಡುವುದು.

ಎದ್ದು ಭಯದಿಂದ ಅತ್ತಿತ್ತ ನೋಡುವನು.

ಪೂರ್ಣಾನಂದನು ಒಬ್ಬ ಕೆಲಸಗಾರನೊಂದಿಗೆ ಪ್ರವೇಶಿಸುವನು.

ಪೂರ್ಣಾನಂದ

ಏನು ಸಾಹುಕಾರರೇ! ಯಾಕೆ ಇಷ್ಟೊಂದು ಗಾಬರಿಯಾಗಿರುವಿರಿ?

ಸೇಟು

ಯಾರದು! ನೀವೇ, ಬನ್ನಿ! ಕುಳಿತುಕೊಳ್ಳಿ. ಏನು ಇಷ್ಟುದೂರ ಬಂದದ್ದು.

ಪೂರ್ಣಾನಂದ

ಏನೂ ಇಲ್ಲ. ನಿಮ್ಮೊಡನೆ ಕೊಂಚ ಮಾತಾಡುವುದಕ್ಕೆ ಬಂದೆ.

ಸೇಟು

ಆಗಬಹುದು, ಏನದು ಹೇಳಿ.

ಪೂರ್ಣಾನಂದ

ನಿಮ್ಮ ಕೆಲಸಗಾರರಿಗೆ ಸಂಬಂಧಪಟ್ಟ ಮಾತು. ನಿನ್ನೆ ಮೇಸ್ತ್ರಿಯು ಗುಂಡು ಹೊಡೆದು ಆ ಮುದುಕನನ್ನು ಕೊಂದುಬಿಟ್ಟಿದಾನೆ. ಕೆಲಸಗಾರರೆಲ್ಲರೂ ಒಟ್ಟುಗೂಡಿ ಧಾಳಿಯೇಳಲು ಹವಣಿಸುತ್ತಿದ್ದಾರೆ. ಅನೇಕರು ಬೆಂಕಿಯನ್ನುಗುಳುತ್ತ ಕತ್ತಿಯನ್ನು ಮಸೆಯುತ್ತಿರುವರು. ದೊಂಬಿಗೆ ಅವಕಾಶಕೊಟ್ಟರೆ ಮುಂದೆ ದೊಡ್ಡ ಅನಾಹುತವಾಗುವುದು.

ಸೇಟು

ಏನುಮಾಡುವುದು! ಕೆಲಸಗಾರರ ಸಹವಾಸವೇ ಹೀಗೆ! ಅವರು ಮಾಡುವುದನ್ನು ಕೇಳಿದರೆ ಏನು ಮಾಡಿದರೂ ತೀರದೆನಿಸುವುದು.

ನೀವು ಹೇಳುವುದೇನು ಹೇಳಿ.

ಪೂರ್ಣಾನಂದ

ನೀವು ಹಿಡಿದುಕೊಂಡು ಬಂದಿರುವ ದೇವಿಯನ್ನು ಕೂಡಲೇ ಬಿಟ್ಟು ನಷ್ಟಪಟ್ಟವರಿಗೆ ಕೊಂಚ ಸಹಾಯ ಮಾಡಿ. ನೀವೇ ಬಂದು ಒಳ್ಳೆಯ ಮಾತಾಡಿದರೆ ಅವರು ಸುಮ್ಮನಾಗಬಹುದು. ಅಂತೂ ಕೆಲಸಗಾರರನ್ನು ಎದುರು ಹಾಕಿಕೊಳ್ಳುವುದು ಒಳ್ಳೆಯದಲ್ಲ.

ಕಾರಕ

ಕ್ಷಮಿಸಬೇಕು. ತಮಗೆ ವಿಷಯ ಸರಿಯಾಗಿ ತಿಳಿಯದು. ಆ ಕೂಲಿಗಾರರು ಕೊಡುವ ತೊಂದರೆಯೊಂದೂ ನಿಮಗೆ ತಿಳಿಯದು. ಅವರ ತಪ್ಪಿಗೆ ನಮ್ಮನ್ನು ದೂರುವುದರಿಂದ ಪ್ರಯೋಜನವಿಲ್ಲ.

ಪೂರ್ಣಾನಂದ

ಹಾಗಾದರೆ ನೀವು ದೇವಿಯನ್ನು ಹಿಡಿದುಕೊಂಡು ಬಂದಿಲ್ಲವೇ !

ಸೇಟು

ಹೌದು, ಅವರ ತಂದೆ ನನ್ನ ಬಳಿಯಲ್ಲಿ ಐವತ್ತು ರೂಪಾಯಿಗಳನ್ನು ಸಾಲ ತೆಗೆದುಕೊಂಡು ಬಹು ದಿನಗಳಾದವು. ಇದುವರಿಗೂ ಒಂದು ಕಾಸು ಸಹಾ ಕೊಟ್ಟಿಲ್ಲ.

ಅದರ ಬಡ್ಡಿ ಮತ್ತು ಅಸಲೂ ಸೇರಿ ನೂರೈವತ್ತು ರೂಪಾಯಿ ಆಗುವುದು. ಯಾರುಬೇಕಾದರೂ ಅದನ್ನು ಕೊಟ್ಟು ಅವಳನ್ನು ಬಿಡಿಸಿಕೊಂಡು ಹೋಗಲಿ.

ಪೂರ್ಣಾನಂದ

ಇದೆಲ್ಲಿಯ ಧರ್ಮ. ಆಕೆಯ ತಂದೆಯನ್ನು ನೀವೇ ಕೊಂದುಹಾಕಿದಿರಿ. ಅವಳ ಬಂಧುಬಳಗದವರು ಯಾರೂ ಇಲ್ಲಿಲ್ಲ. ಹಣ ಕೊಡುವವರಾದರೂ ಯಾರು? ಸುಮ್ಮನೇ ಆ ತಬ್ಬಲಿ ಹುಡುಗಿಯನ್ನು ಬಿಡುವುದು ಒಳ್ಳೆಯದು.

ಸೇಟು

ಅದು ನಡೆಯದ ಮಾತು. ನೀವು ಇದಕ್ಕೆ ಬರ ಬೇಡಿ.

ಪೂರ್ಣಾನಂದ

ನಾನು ಬೇಕಾದರೆ ನಿಮ್ಮ ಅಸಲು ಕೊಡುವೆನು. ಪಾಪ ! ಆ ಹುಡುಗಿಯನ್ನು ಬಿಟ್ಟು ಬಿಡಿ.

ಕೆಲಸಗಾರರೊಡನೆ ಮಾತಾಡಿ ಸಮಾಧಾನಮಾಡಿ ಕೊಳ್ಳಿ !

ಸೇಟು

ಬಡ್ಡಿಯನ್ನು ಬಿಡುವುದು ಸಾಧ್ಯವಿಲ್ಲ.

ಕಾರಕ

ಇದರಲ್ಲಿ ನಿಮಗೇಕೆ ಇಷ್ಟು ಉತ್ಸಾಹ! ಈ ವಿಷಯ ನಿಮಗೆ ಸಂಬಂಧಪಟ್ಟದ್ದಲ್ಲ. ಅವರೇ ಬಂದು ಕೇಳಿದರೆ ನಾವು ಯೋಚನೆಮಾಡುತ್ತೇವೆ.

ಪೂರ್ಣಾನಂದ

ಹಾಗಾದರೆ ಹೊರಡುವೆನು. ಇನ್ನು ನನ್ನ ತಪ್ಪಿಲ್ಲ!

ಎದ್ದು ಹೊರಡುವುದಕ್ಕೆ ಸಿದ್ಧನಾಗುವನು.

ಕಾರಕನು ತನ್ನಲ್ಲಿದ್ದ ಶಿಳ್ಳೆಯನ್ನು ಊದುವನು.

ಎರಡು ಕಡೆಯಿಂದ ನಾಲ್ಕು ಜನ ಜವಾನರು ದೊಡ್ಡ ದೊಣ್ಣೆಗಳನ್ನು ಹಿಡಿದುಕೊಂಡು ಬಂದು ನಿಲ್ಲುವರು.

ಕಾರಕ

ಇವರನ್ನು ಕರೆದುಕೊಂಡು ಹೋಗಿ ನಮ್ಮ ಹಿಂದಿನ ಕೊಠಡಿಯಲ್ಲಿ ಕೂಡಿಸು. ನಾನು ಬಂದು ಮಾತನಾಡುವೆನು.

ಪೂರ್ಣಾನಂದ

ಹಾಗಾದರೆ ನಾನು ಹೊರಗೆ ಹೋಗಲು ಸ್ವಾತಂತ್ರ್ಯವಿಲ್ಲವೇ!

ಕಾರಕ

ಇಲ್ಲ! ನಿಮ್ಮಿಂದ ಕೊಂಚ ಕೆಲಸವಾಗಬೇಕಾಗಿದೆ. ಅಲ್ಲಿಯವರಿಗೆ ನಮ್ಮಲ್ಲಿಯೇ ಇರಬೇಕು.

ಜವಾನರನ್ನು ನೋಡಿ

ಹೂ! ಕರೆದುಕೊಂಡು ಹೋಗಿ.

ಅವರು ಹತ್ತಿರ ಬಂದು ಕೈಹಿಡಿದುಕೊಂಡು ಪೂರ್ಣಾನಂದನನ್ನೂ ಕೂಲಿಯವನನ್ನೂ ಎಳೆಯುವರು.

ಕೂಲಿಯವನು ಚಪ್ಪಾಳೆ ತಟ್ಟುವನು. ಹೊರಗಡೆಯಿಂದ ಸುಗ್ಗಿನ ಸದ್ದಾಗುವುದು.